| | | |
|---|---|---|
| | ರೇಡಿಯೋಲಾಜಿಸ್ಟ್ | 1 |
| | ಪೋರೆನ್ಸಿಕ್ ತಜ್ಞ | 1 |
| | ಪೆಥಾಲಜಿಸ್ಟ್ | 1 |
| | ಮೈಕ್ರೋಬಯಾಲಜಿಸ್ಟ್ | 1 |
| | ಬಯೋಕೆಮಿಸ್ಟ್ | 1 |
| | ಉಪ ಮುಖ್ಯ ವೈದ್ಯಾಧಿಕಾದರಿ(ಆ.ಶ್ರೇ)/ಉಪ ಮುಖ್ಯ ವೈದ್ಯಾಧಿಕಾರಿ | 3 |
| | ಹಿರಿಯ ವೈದ್ಯಾಧಿಕಾರಿ | 6 |
| | | **31** |
| 4. | ಶುಶ್ರೂಷಕರು ಅಧೀಕ್ಷಕರು ದರ್ಜೆ–1 | 1 |
| 5. | ಶುಶ್ರೂಷಕರು ಅಧೀಕ್ಷಕರು ದರ್ಜೆ–2 | 5 |
| 6. | ಹಿರಿಯ ಶುಶ್ರೂಷಕರು | 10 |
| 7. | ಶುಶ್ರೂಷಕರು | 50 |
| 8. | ಫಿಜಿಯೋಥೆರಪಿಸ್ಟ್ | 2 |
| 9. | ಹಿರಿಯ ಫಾರ್ಮಸಿಸ್ಟ್ | 2 |
| 10. | ಕಿರಿಯ ಫಾರ್ಮಸಿಸ್ಟ್ | 4 |
| 11. | ಹಿರಿಯ ಪ್ರಯೋಗ ಶಾಲಾ ಟೆಕ್ನಾಲೊಜಿಸ್ಟ್ | 2 |
| 12. | ಕಿರಿಯ ಪ್ರಯೋಗ ಶಾಲಾ ಟೆಕ್ನಾಲೊಜಿಸ್ಟ್ | 4 |
| 13. | ಪ್ರಯೋಗ ಶಾಲಾ ಸಹಾಯಕರು | 2 |
| 14. | ನೇತ್ರಾಧಿಕಾರಿ | 1 |
| 15. | ಹಿರಿಯ ಮೆಡಿಕಲ್ ರೇಡಿಯೋ ಟೆಕ್ನಾಲೊಜಿಸ್ಟ್ | 2 |
| 16. | ಕಿರಿಯ ಮೆಡಿಕಲ್ ರೇಡಿಯೋ ಟೆಕ್ನಾಲೊಜಿಸ್ಟ್ | 3 |
| 17. | ಕತ್ತಲೆ ಕೋಣೆ ಸಹಾಯಕ/ಕ್ಷ–ಕಿರಣ ಸಹಾಯಕ | 2 |
| 18. | ಸಹಾಯಕ ಆಡಳಿತಾಧಿಕಾರಿ | 1 |
| 19. | ಕಛೇರಿ ಅಧೀಕ್ಷಕರು | 2 |
| 20. | ಪ್ರ.ದ.ಸಹಾಯಕರು # | 2 |
| 21. | ದ್ವಿ.ದ.ಸಹಾಯಕರು # | 3 |
| 22. | ಮೆಡಿಕಲ್ ರೆರ್ಕಾಡ್ ಟೆಕ್ನಿಷಿಯನ್ | 2 |
| 23. | ಎಲೆಕ್ಟ್ರಿಷಿಯನ್ | 1 |
| 24. | ಕಾರ್ಪೆಂಟರ್(ಹೊರ ಗುತ್ತಿಗೆ) | 1 |
| 25. | ಪ್ಲಂಬರ್(ಹೊರ ಗುತ್ತಿಗೆ) | 1 |
| 26. | ಅಡುಗೆಯವರು | 2 |
| 27. | ಅಡುಗೆ ಸಹಾಯಕರು | 4 |
| 28. | ಗ್ರೂಪ್–ಡಿ | 46 |
| 29. | ವಾಹನ ಚಾಲಕರು | 4 |
| 30. | ಸೈಕಲಾಜಿಸ್ಟ್ | 1 |
| 31. | ಕ್ಲಿನಿಕಲ್ ಸೈಕಲಾಜಿಸ್ಟ್ | 1 |
| 32. | ಸೈಕ್ಯಾಟ್ರಿಕ್ ಸೋಷಿಯಲ್ ವರ್ಕರ್ | 1 |
| 33. | ಇ.ಸಿ.ಜಿ. ತಂತ್ರಜ್ಞರು | 1 |
| 34. | ಸೋಷಿಯಲ್ ವರ್ಕರ್ (Skin V.D) | 2 |
| 35. | ದಂತ ಮೆಕ್ಯಾನಿಕ್ | 1 |
| | **ಒಟ್ಟು** | **195** |

# ಸರ್ಕಾರಿ ಆದೇಶದಂತೆ ಗಣಕ ಯಂತ್ರ ಅನುಭವ ಹೊಂದಿರತಕ್ಕದ್ದು, ಇಲ್ಲವಾದಲ್ಲಿ ವಾರ್ಷಿಕ ವೇತನ ಬಡ್ತಿ ನೀಡತಕ್ಕದ್ದಲ್ಲ.

| ಜಿಲ್ಲಾ ಆಸ್ಪತ್ರೆಗಳು 300 ಹಾಸಿಗೆಗಳಿಗೆ ನಾರ್ಮ್ಸ್ ಪ್ರಕಾರ ಬೇಕಾಗಿರುವ ಹುದ್ದೆಗಳ ವಿವರ | | |
|---|---|---|
| ಕ್ರಮ ಸಂಖ್ಯೆ | ಹುದ್ದೆಗಳ ಹೆಸರು | ಹುದ್ದೆಗಳ ಸಂಖ್ಯೆ |
| 1. | ಜಿಲ್ಲಾ ಶಸ್ತ್ರ ಚಿಕಿತ್ಸಕರು ಹಾಗೂ ಮೃದ್ಯಾಕೀಯ ಅಧೀಕ್ಷಕರು | 1 |
| 2. | ನಿವಾಸಿ ವೈದ್ಯಾಧಿಕಾರಿ | 1 |
| 3. | ಫಿಜಿಷಿಯನ್ | 1 |
| | ಜನರಲ್ ಸರ್ಜನ್ | 1 |
| | ಸ್ತ್ರೀ ರೋಗ ತಜ್ಞರು | 3 |
| | ದಂತ ತಜ್ಞರು/ಮು.ದಂ.ಆ(ಆ.ಶ್ರೇ) | 2 |
| | ಅರವಳಿಕೆ ತಜ್ಞರು | 2 |
| | ಮಕ್ಕಳ ತಜ್ಞರು | 3 |
| | ನೇತ್ರ ತಜ್ಞರು | 1 |
| | ಕೀಲು ಮೂಳೆ ತಜ್ಞರು | 2 |
| | ಕಿವಿ,ಮೂಗು,ಗಂಟಲು, ತಜ್ಞರು | 1 |
| | ಚರ್ಮರೋಗ ತಜ್ಞರು | 1 |
| | ಸೈಕ್ಯಾಟಿಸ್ಟ್ | 1 |
| | ರೇಡಿಯೋಲಾಜಿಸ್ಟ್ | 1 |
| | ಫೋರೆನ್‌ಸಿಕ್ ತಜ್ಞ | 1 |
| | ಪೆಥಾಲಜಿಸ್ಟ್ | 1 |
| | ಮೈಕ್ರೋಬಯಾಲಜಿಸ್ಟ್ | 1 |
| | ಬಯೋಕೆಮಿಸ್ಟ್ | 1 |
| | ಉಪ ಮುಖ್ಯ ವೈದ್ಯಾಧಿಕಾರಿ(ಆ.ಶ್ರೇ)/ಉಪ ಮುಖ್ಯ ವೈದ್ಯಾಧಿಕಾರಿ | 4 |
| | ಹಿರಿಯ ವೈದ್ಯಾಧಿಕಾರಿ | 6 |
| | | **35** |
| 4. | ಶುಶ್ರೂಷಕರು ಅಧೀಕ್ಷಕರು ದರ್ಜೆ–1 | 1 |
| 5. | ಶುಶ್ರೂಷಕರು ಅಧೀಕ್ಷಕರು ದರ್ಜೆ–2 | 5 |
| 6. | ಹಿರಿಯ ಶುಶ್ರೂಷಕರು | 10 |
| 7. | ಶುಶ್ರೂಷಕರು | 50 |
| 8. | ಫಿಜಿಯೋಥೆರಪಿಸ್ಟ್ | 2 |
| 9. | ಹಿರಿಯ ಫಾರ್ಮಸಿಸ್ಟ್ | 2 |
| 10. | ಕಿರಿಯ ಫಾರ್ಮಸಿಸ್ಟ್ | 4 |
| 11. | ಹಿರಿಯ ಪ್ರಯೋಗ ಶಾಲಾ ಟೆಕ್ನಾಲೋಜಿಸ್ಟ್ | 2 |
| 12. | ಕಿರಿಯ ಪ್ರಯೋಗ ಶಾಲಾ ಟೆಕ್ನಾಲೋಜಿಸ್ಟ್ | 4 |
| 13. | ಪ್ರಯೋಗ ಶಾಲಾ ಸಹಾಯಕರು | 2 |
| 14. | ನೇತ್ರಾಧಿಕಾರಿ | 1 |
| 15. | ಹಿರಿಯ ಮೆಡಿಕಲ್ ರೇಡಿಯೋ ಟೆಕ್ನಾಲೋಜಿಸ್ಟ್ | 2 |
| 16. | ಕಿರಿಯ ಮೆಡಿಕಲ್ ರೇಡಿಯೋ ಟೆಕ್ನಾಲೋಜಿಸ್ಟ್ | 3 |
| 17. | ಕತ್ತಲೆ ಕೋಣೆ ಸಹಾಯಕ/ಕ್ಷ–ಕಿರಣ ಸಹಾಯಕ | 2 |
| 18. | ಸಹಾಯಕ ಆಡಳಿತಾಧಿಕಾರಿ | 1 |
| 19. | ಕಛೇರಿ ಅಧೀಕ್ಷಕರು | 2 |
| 20. | ಪ್ರ.ದ.ಸ | 2 |

| | | |
|---|---|---|
| 21. | ದ್ವಿ.ದ.ಸ. | 4 |
| 22. | ಮೆಡಿಕಲ್ ರೆಕಾರ್ಡ್ ಟೆಕ್ನಿಷಿಯನ್ | 2 |
| 23. | ಎಲೆಕ್ಟ್ರಿಷಿಯನ್ | 1 |
| 24. | ಕಾರ್ಪೆಂಟರ್(ಹೊರ ಗುತ್ತಿಗೆ) | 1 |
| 25. | ಪ್ಲಂಬರ್(ಹೊರ ಗುತ್ತಿಗೆ) | 1 |
| 26. | ಅಡುಗೆಯವರು | 2 |
| 27. | ಅಡುಗೆ ಸಹಾಯಕರು | 4 |
| 28. | ಗ್ರೂಪ್–ಡಿ | 46 |
| 29. | ವಾಹನ ಚಾಲಕರು | 4 |
| 30. | ಸೈಕಲಾಜಿಸ್ಟ್ | 1 |
| 31. | ಕ್ಲಿನಿಕಲ್ ಸೈಕಲಾಜಿಸ್ಟ್ | 1 |
| 32. | ಸೈಕ್ಯಾಟ್ರಿಕ್ ಸೋಷಿಯಲ್ ವರ್ಕರ್ | 1 |
| 33. | ಇ.ಸಿ.ಜಿ. ತಂತ್ರಜ್ಞರು | 1 |
| 34. | ಸೋಷಿಯಲ್ ವರ್ಕರ್ (Skin V.D) | 2 |
| 35. | ದಂತ ಮೆಕ್ಯಾನಿಕ್ | 1 |
| | **ಒಟ್ಟು** | **202** |

# ಸರ್ಕಾರಿ ಆದೇಶದಂತೆ ಗಣಕ ಯಂತ್ರ ಅನುಭವ ಹೊಂದಿರತಕ್ಕದ್ದು, ಇಲ್ಲವಾದಲ್ಲಿ ವಾರ್ಷಿಕ ವೇತನ ಬಡ್ತಿ ನೀಡತಕ್ಕದ್ದಲ್ಲ.

**P.R. 587**

**SC. 5000**

**ಬಿ.ಎಸ್. ನಾಗರಾಜ್,**
ಸರ್ಕಾರದ ಅಧೀನ ಕಾರ್ಯದರ್ಶಿ,
(ಆರೋಗ್ಯ 1 ಮತ್ತು 2)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,

## ಇಂಧನ ಸಚಿವಾಲಯ

**ವಿಷಯ :** ಶ್ರೀಮತಿ ಕೆ.ಜೆ.ಸೀತಮ್ಮ ಕೋಂ ದಿ॥ ಡಿ.ಸಿ.ವಸಂತ, ಹೆಲ್ಪರ್, ಚಿಕ್ಕಮಗಳೂರು ಇವರಿಗೆ ತಡವಾಗಿ ಪಾವತಿಯಾದ ಪಿಂಚಣಿ /ಉಪದಾನ ಇವುಗಳ ಮೇಲೆ ಬಡ್ಡಿಯನ್ನು ಪಾವತಿಸುವ ಬಗ್ಗೆ.

**ಓದಲಾಗಿದೆ :**
1. ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಆದೇಶ ದಿನಾಂಕ: 27.08.2007.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 29 ಇಬಿಎಸ್ 2008 ದಿನಾಂಕ: 28.02.2009.
3. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 26 ಪಿಇಎನ್1 2013 ದಿನಾಂಕ: 27.09.2013.
4. ಸರ್ಕಾರದ ಆದೇಶ ಸಂಖ್ಯೆ: ಆಇ 199 ಪಿಇಎನ್ 1993 ದಿನಾಂಕ: 13.09.1994.
5. ಸರ್ಕಾರದ ಸುತ್ತೋಲೆ ಸಂಖ್ಯೆ: ಆಇ 01 ಪಿಇಎನ್ 2004 ದಿನಾಂಕ: 02.09.2004.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮಾಂಕ (1)ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಶ್ರೀಮತಿ ಕೆ.ಜೆ.ಸೀತಮ್ಮ ಕೋಂ ದಿ॥ ಡಿ.ಸಿ.ವಸಂತ, ಹೆಲ್ಪರ್ ಇವರಿಗೆ ಸರ್ಕಾರದಿಂದ ಹೊರಡಿಸಿರುವ ಅಧಿಕೃತ ಜ್ಞಾಪನ ದಿನಾಂಕ: 21.03.1988 ರನ್ವಯ ಕೆ.ಜಿ.ಐ.ಡಿ. ಯಿಂದ ಬರುವ ವಿಮಾ ಮೊತ್ತವನ್ನು ಒಳಗೊಂಡಂತೆ ಪಿಂಚಣಿ ಮತ್ತು ಉಪದಾನಗಳನ್ನು ಶೇ. 6% ರಂತೆ ಬಡ್ಡಿ ಲೆಕ್ಕ ಹಾಕಿ 3 ತಿಂಗಳ ಒಳಗಡೆ ಬಿಡುಗಡೆ ಮಾಡುವಂತೆ ಹಾಗೂ ವಿಳಂಬವಾದಲ್ಲಿ, ವಿಳಂಬ ಪ್ರಕರಣಗಳಲ್ಲಿ ಸರ್ಕಾರಿ ಆದೇಶಗಳನ್ವಯ ಅನ್ವಯಿಸುವ ಬಡ್ಡಿ ದರಗಳನ್ನು ಲೆಕ್ಕಚಾರ ಮಾಡಿ ಪಾವತಿಸುವಂತೆ ನಿರ್ದೇಶಿಸಿದೆ ಹಾಗೂ ಯಾವುದೇ ಕಾರಣಕ್ಕೂ ಅವಲಂಬಿತರಿಗೆ ಸರ್ಕಾರಿ ಕೆಲಸವನ್ನು ನೀಡುವಂತಿಲ್ಲ ಎಂಬ ಷರತ್ತನ್ನು ವಿಧಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಆರ್ಥಿಕ ಇಲಾಖೆಯ ದಿನಾಂಕ: 21.03.1988 ರ ಅಧಿಕೃತ ಜ್ಞಾಪನದನ್ವಯ ಕೆ.ಜಿ.ಐ.ಡಿ. ಯಿಂದ ಬರುವ ವಿಮಾ ಮೊತ್ತವನ್ನು ಒಳಗೊಂಡಂತೆ ಇತರೆ ಪಿಂಚಣಿ ಮತ್ತು ಉಪದಾನಗಳನ್ನು ದಿನಾಂಕ: 23.11.1996 ರಿಂದ ಬಡ್ಡಿಯನ್ನು ಶೇ. 6% ರಂತೆ ಲೆಕ್ಕಚಾರ ಮಾಡಿ 3 ತಿಂಗಳ ಅವಧಿಗೆ ಬಿಡುಗಡೆ ಮಾಡಲು ಹಾಗೂ ತದನಂತರದ ವಿಳಂಬದ ಅವಧಿಗೆ ಹಾಲಿ ಚಾಲ್ತಿಯಲ್ಲಿರುವ ನಿಯಮಗಳನುಸಾರ ಬಡ್ಡಿ ದರ ಲೆಕ್ಕಚಾರ ಮಾಡಿ ಪಾವತಿಸಲು ಆರ್ಥಿಕ ಇಲಾಖೆ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ಗಳ ಸಹಮತಿಯೊಂದಿಗೆ ಆದೇಶ ಹೊರಡಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (3)ರ ಟಿಪ್ಪಣಿಯಲ್ಲಿ ಪಿಂಚಣಿ ಮರು ಪಾವತಿ ಮೊತ್ತ ರೂ. 3,64,486/– ಗಳಿಗೆ ಮಹಾಲೇಖಪಾಲರು ನೀಡಿರುವ ಪ್ರಾಧಿಕರಣ ಪತ್ರದ ಪ್ರತಿಯ ಆಧಾರದ ಮೇಲೆ ಕ್ರಮ ಸಂಖ್ಯೆ: 4 ಮತ್ತು 5 ರನ್ವಯ ದಿನಾಂಕ: 20.08.2003 ರವರೆಗೆ ಶೇ.12 ರಂತೆ ಮತ್ತು

ದಿನಾಂಕ: 21.08.2003 ರಿಂದ ಮಹಾಲೇಖಪಾಲರು ಪ್ರಾಧೀಕರಣ ಪತ್ರ ಕೊಟ್ಟ ದಿನಾಂಕದ ಹಿಂದಿನ ತಿಂಗಳ ಕೊನೆಯ ದಿನಾಂಕದವರೆಗೆ ಶೇ.8ರಷ್ಟು ಬಡ್ಡಿ ದರದಲ್ಲಿ ಬಡ್ಡಿಯನ್ನು ಲೆಕ್ಕಚಾರ ಮಾಡಿ ಇಲಾಖಾ ಕಾರ್ಯದರ್ಶಿಗಳ ಅನುಮೋದನೆಯೊಂದಿಗೆ ಪಾವತಿಸಲು ಸಹಮತಿ ನೀಡಿರುತ್ತದೆ.

I ಮರಣ ಉಪದಾನ ಮೊತ್ತ ರೂ.5280/– ಕ್ಕೆ ದಿನಾಂಕ: 25.03.2000 ದಿಂದ ದಿನಾಂಕ: 20.08.2003 ರವರೆಗೆ ಶೇ.12 ರಷ್ಟು ಹಾಗೂ ದಿನಾಂಕ: 21.08.2003 ರಿಂದ ದಿನಾಂಕ: 30.04.2009 ರವರೆಗೆ ಶೇ.8 ರಂತೆ ರೂ.4,565.18 ಗಳನ್ನು ಪಾವತಿಸಬೇಕಾಗಿದೆ.

II ಪಿಂಚಣಿ ಬಾಕಿ ಪಾವತಿ ಮೊತ್ತ ರೂ. 3,64,486/– ಕ್ಕೆ ದಿನಾಂಕ: 25.03.2000 ದಿಂದ ದಿನಾಂಕ: 20.08.2003 ರವರೆಗೆ ಶೇ.12 ರಷ್ಟು ಹಾಗೂ ದಿನಾಂಕ: 21.08.2003 ರಿಂದ ದಿನಾಂಕ: 30.04.2009 ರವರೆಗೆ ಶೇ.8 ರಂತೆ ಇಳಿಮುಖ ದರದಲ್ಲಿ ಮೊತ್ತ ರೂ. 1,74,011.12 ಗಳನ್ನು ಪಾವತಿಸಬೇಕಾಗಿದೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 64 ಇಬಿಎಸ್ 2009, ಬೆಂಗಳೂರು, ದಿನಾಂಕ:19.07.2014.**

ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶ ದಿನಾಂಕ: 27.08.2007 ರಲ್ಲಿ ಆದೇಶಿಸಿರುವಂತೆ ದಿ॥ ಡಿ.ಸಿ.ವಸಂತ, ಹೆಲ್ಪರ್, ವಿದ್ಯುತ್ ಪರಿವೀಕ್ಷಣಾ ಇಲಾಖೆ, ಚಿಕ್ಕಮಗಳೂರು ಇವರ ಪತ್ನಿ ಶ್ರೀಮತಿ ಕೆ.ಜೆ.ಸೀತಮ್ಮ ಇವರಿಗೆ ಈಗಾಗಲೇ ಸರ್ಕಾರವು ಮರಣ ಉಪದಾನ ಹಾಗೂ ಪಿಂಚಣಿ ಉಪದಾನ ಮೊತ್ತವನ್ನು ಪಾವತಿಸಲಾಗಿದೆ ಹಾಗೂ ಈ ಸಂಬಂಧ ವಿಳಂಬದ ಅವಧಿಗೆ ನೀಡಬೇಕಾದ ಬಡ್ಡಿ ದರಗಳು ಈ ಕೆಳಕಂಡಂತೆ ಪಾವತಿಸಲು ಆದೇಶಸಿದೆ.

**ಮರಣ ಉಪದಾನದ ಮೊತ್ತದ ಮೇಲೆ ಬಡ್ಡಿ ದರ**

ಮರಣ ಉಪದಾನದ ಮೊತ್ತವಾದ ರೂ.5,280 ನ್ನು ಪಾವತಿಸಲಾಗಿದೆ. ಈ ಸಂಬಂಧ ವಿಳಂಬ ಅವಧಿಗೆ ನೀಡಬೇಕಾದ ಬಡ್ಡಿ ದರ ಈ ಕೆಳಕಂಡಂತಿದೆ:–

| | |
|---|---|
| 25.03.2000 ರಿಂದ 20.08.2003– 40 ತಿಂಗಳು 27 ದಿನಗಳಿಗೆ ಶೇ.12 ರಂತೆ | ರೂ.2158.86 |
| 21.08.2003 ರಿಂದ 30.04.2009 ರವರೆಗೆ 68 ತಿಂಗಳು 11 ದಿನಗಳಿಗೆ ಶೇ.8 ರಂತೆ | ರೂ.2406.32 |
| **ಒಟ್ಟು** | **ರೂ.4565.18** |

**ಪಿಂಚಣಿ ಉಪದಾನದ ಮೊತ್ತದ ಮೇಲೆ ಬಡ್ಡಿ ದರ**

ಪಿಂಚಣಿ ಉಪದಾನದ ಮೊತ್ತವಾದ ರೂ.3,64,486/–ನ್ನು ಪಾವತಿಸಲಾಗಿದೆ. ಈ ಸಂಬಂಧ ವಿಳಂಬ ಅವಧಿಗೆ ನೀಡಬೇಕಾದ ಬಡ್ಡಿ ಈ ಕೆಳಕಂಡಂತಿದೆ:–

| | |
|---|---|
| 25.03.2000 ರಿಂದ 20.08.2003– 40 ತಿಂಗಳು 27 ದಿನಗಳಿಗೆ ಶೇ.12 ರಂತೆ | ರೂ.1,34,503.56 |
| 21.08.2003 ರಿಂದ 30.04.2009 ರವರೆಗೆ 68 ತಿಂಗಳು 11 ದಿನಗಳಿಗೆ ಶೇ.8 ರಂತೆ | ರೂ. 39,507.56 |
| **ಒಟ್ಟು** | **ರೂ.1,74,011.12** |

ದಿ॥ ಡಿ.ಸಿ.ವಸಂತ, ಹೆಲ್ಪರ್, ವಿದ್ಯುತ್ ಪರಿವೀಕ್ಷಣಾ ಇಲಾಖೆ, ಚಿಕ್ಕಮಗಳೂರು ಇವರ ಪತ್ನಿ ಶ್ರೀಮತಿ ಕೆ.ಜೆ.ಸೀತಮ್ಮ ರವರಿಗೆ ತಡವಾಗಿ ಪಾವತಿಯಾದ ಮರಣ ಉಪದಾನ ಮತ್ತು ಪಿಂಚಣಿ ಉಪದಾನ ಇವುಗಳ ಮೇಲೆ ಪಾವತಿಸಬೇಕಾದ ಬಡ್ಡಿ ಮೊತ್ತ ಒಟ್ಟು ರೂ.1.78,576.30 (ರೂಪಾಯಿ ಒಂದು ಲಕ್ಷ ಎಪ್ಪತ್ತೆಂಟು ಸಾವಿರದ ಐನೂರ ಎಪ್ಪತ್ತಾರು ಮಾತ್ರ) ನ್ನು ಪಾವತಿಸುವಂತೆ ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆ ಸಂಖ್ಯೆ: ಆಇ 26 ಪಿಇಎನ್1 2013 ದಿನಾಂಕ: 27.09.2013ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಮೀರ್ ಮಡಿಮನ್**
ಪೀಠಾಧಿಕಾರಿ,
ಇಂಧನ ಇಲಾಖೆ.

**PR.649**
**SC- 50**

## ಇಂಧನ ಸಚಿವಾಲಯ

**ವಿಷಯ :** ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ ವೈಟ್‌ಫೀಲ್ಡ್, ಬೆಂಗಳೂರು ಇವರಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವ ಸಂಬಂಧ ಸಹಾಯ ಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 51 ಇಇಬಿ 2001 ದಿನಾಂಕ: 27.04.2001.
2. ಆದೇಶ ಸಂಖ್ಯೆ: ಇಂಇ 60 ಇಇಬಿ 2009 ದಿನಾಂಕ: 31.03.2010.
3. ಬೆಸ್ಕಾಂನ ಪತ್ರ ಸಂಖ್ಯೆ: ವ್ಯನಿ/ನಿ(ಹ)/ಮುಪ್ರವ್ಯ(ಹ&ವಾ)/ಬಿಸಿ–27/2301/14–15/2 ದಿನಾಂಕ: 02.07.2013.

**ಪ್ರಸ್ತಾವನೆ:–**

ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ವೈಟ್ ಫೀಲ್ಡ್, ಬೆಂಗಳೂರು ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ, ಬೆಂಗಳೂರು ಇವುಗಳು ಬಳಸುತ್ತಿರುವ ವಿದ್ಯುತ್ತಿಗೆ ಸಂಬಂಧಿಸಿದಂತೆ ಪ್ರತಿ ವರ್ಷ ರೂ.2.00 ಕೋಟಿಗಳು ಮೀರದಂತೆ ಸರ್ಕಾರದಿಂದ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ ಸಂಸ್ಥೆಗೆ ಸಹಾಯಧನ ಬಿಡುಗಡೆ ಮಾಡಲು ಮೇಲೆ ಓದಲಾದ ಕ್ರಮಾಂಕ (1) ಮತ್ತು (2) ರ ಆದೇಶಗಳಲ್ಲಿ ಅವಕಾಶ ಕಲ್ಪಿಸಲಾಗಿರುತ್ತದೆ. ಅದರಂತೆ ಪ್ರತಿ ವರ್ಷ ಸಹಾಯಧನ ಬಿಡುಗಡೆ ಮಾಡಲಾಗುತ್ತಿದೆ.

ಮೇಲೆ ಓದಲಾದ ಕ್ರಮಾಂಕ (3)ರ ಅರೆ ಸರ್ಕಾರಿ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ ರವರು ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ವೈಟ್ ಫೀಲ್ಡ್, ಬೆಂಗಳೂರು ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ, ಬೆಂಗಳೂರು ರವರಿಗೆ ಒದಗಿಸುತ್ತಿರುವ ವಿದ್ಯುತ್ ಬಾಬ್ತು 2007–2008 ನೇ ಸಾಲಿಗೆ ಬಿಡುಗಡೆ ಮಾಡಬೇಕಾಗಿದ್ದ ರೂ. 2.00 ಲಕ್ಷಗಳ ಮೊತ್ತವೂ ಸೇರಿದಂತೆ ಮಾರ್ಚ್ 2014ರ ಅಂತ್ಯದವರೆಗೆ ಸದರಿ ಸಂಸ್ಥೆಯವರು ಬಳಸಿರುವ ವಿದ್ಯುತ್ ಬಿಲ್ಲಿನ ಮೊತ್ತ ರೂ. 3,93,34,298.00/–ಗಳಷ್ಟು ಬಾಕಿ ಇದ್ದು, ಈ ಬಾಬ್ತು ಸಹಾಯಧನವನ್ನು ಕೂಡಲೇ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 64 ಇಇಬಿ 2014, ಬೆಂಗಳೂರು, ದಿನಾಂಕ:08.07.2014.**

ಶ್ರೀ ಸತ್ಯಸಾಯಿ ಉನ್ನತ ವೈದ್ಯಕೀಯ ವಿಜ್ಞಾನ ಸಂಸ್ಥೆ ವೈಟ್ ಫೀಲ್ಡ್, ಬೆಂಗಳೂರು ಹಾಗೂ ಶ್ರೀ ಸತ್ಯಸಾಯಿ ಜನರಲ್ ಆಸ್ಪತ್ರೆ, ಬೆಂಗಳೂರು ಇವರು 2013–14ನೇ ಸಾಲಿನಲ್ಲಿ ಬಳಸಿರುವ ವಿದ್ಯುತ್ ಬಿಲ್ಲಿಗೆ ಸಂಬಂಧಿಸಿದಂತೆ ವ್ಯವಸ್ಥಾಪಕ ನಿರ್ದೇಶಕರು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಬೆಂಗಳೂರು ಇವರಿಗೆ ಸರ್ಕಾರ ಸಹಾಯಧನದ ರೂಪದಲ್ಲಿ ಗರಿಷ್ಠ ಮೊತ್ತ ರೂ. 2.00 (ರೂ.ಎರಡು ಕೋಟಿಗಳು ಮಾತ್ರ) ಕೋಟಿಗಳನ್ನು ಲೆಕ್ಕ ಶೀರ್ಷಿಕೆ '2801–80–101–1–04–106 (ಯೋಜನೇತರ)' ರಡಿಯಲ್ಲಿ ಬಿಡುಗಡೆ ಮಾಡಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು ಇವರು ಹಣ ಸಂದಾಯ ರಶೀದಿಗೆ (Payees Recipt) ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ, ಇವರ ಮೇಲುರುಜುವನ್ನು ಪಡೆದುಕೊಳ್ಳತಕ್ಕದ್ದು ಹಾಗೂ ಈ ಬಗ್ಗೆ ಸರಿಯಾದ ಲೆಕ್ಕ ತಃಖ್ತೆಯನ್ನು ಇಟ್ಟುಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 3 ಟಿಎಫ್‌ಪಿ 2014 ದಿನಾಂಕ:04.04.2014 ರನ್ವಯ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ರವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**PR.650**

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ENERGY SECRETARIAT

**Sub :** Establishing 1 x 350 MW Gas Based Power Plant at Yelahanka by dismantling the existing Diesel Generation Plant by Karnataka Power Corporation Limited.

**Read** : KPCL letter No.A1Q5D dated: 22.03.2014 and 10.04.2014.

**PREAMBLE:**

1. KPCL in the letter read above has stated that the Board of Karnataka Power Corporation Limited(KPCL) in its 229th Meeting held on 08.08.2013 had approved inprinciple for conversion of existing Diesel Generation Plant at Yelahanka to Gas Based power plant.
2. Further, based on the Report submitted by M/s Tractable Engineering Pvt. Ltd., New Delhi, the Board of KPCL in its 238th meeting held on 13.02.2014 has decided to replace the existing facility with a Combined Cycle Power Plant of 350 MW capacity for optimizing the infrastructure and Resolved as follows:
   a. Establishing 1x350MW Combined Cycle gas power plants (CCPP) in 1st Stage by dismantling the required existing Structure/system of the DG Plant;
   b. Establishing another 350 MW CCPP in 2nd stage depending on cost/availing of gas, cost of generation, load demand and financial viabilities
3. The following infrastructures are available at the existing DG Plant area for the implementation of the Gas based power plant:
   - 120 acres of land of KPCL is available;
   - The Gas Pipeline is already established by GAIL in the outer-ring road, which could be utilized to get the required gas from the GAIL terminal Point (SV3) and GAIL shall make necessary arrangement for laying pipe line for supply of gas to the proposed plant;
   - BWSSB has established 64 MLD capacity Secondary water treatment plant near Hebbal and has agreed to supply required treated water (22 MLD) to the proposed plant;
   - KPTCL has established 220 KV Substation with 2 x150 MVA 220/66/11kv transformers within the existing DG Plant area, which could be utilized for power evacuation;
4. In order to avoid delay in the process of floating the tender and awarding the work to the successful bidder, which requires sufficient time and to meet the power requirement of the State, KPCL has proposed to award the EPC work of the 1x350 MW Gas based combined Cycle Power Plant to MIs BHEL on MOU basis at a negotiated benchmark price.
5. Further, KPCL has stated that M/s.BHEL vide letter dated: 22.03.2014 has proposed to takeup the implementation of the 1x350 MW Combined Cycle Gas Power Plant (CCPP).

6. After detailed examination of the proposal, the following orders are issued.

**GOVERNMENT ORDER NO. EN 28 PPC 2014. BANGALORE, DATED 28th JULY 2014**

Under the circumstances explained above, Government are pleased accord approval for the following:

a) KPCL is permitted to implement 1x350 MW Combined Cycle Gas Power Plant (CCPP) in 1st stage by dismantling the required existing Structure/system of the DG Plant at Yelahanka;

b) KPCL is exempted from KTPP Act, to entrust the work to BHEL on MOU basis as per the Notification No. ಆಇ 418 ವೆಚ್ಚ-12/14 ದಿನಾಂಕ: 01.07.2014 issued by the Finance Department.

c) To entrust the EPC work to M/s BHEL on MOU basis, with benchmark prices by conducting further negotiation with M/s. BHEL for reduction in the benchmark price to reduce the project cost and tariff to the consumers of the State.

d) To provide similar support to the proposed project also as provided for 700 MW+20% Gas based Bidadi CCPP vide GO dated 05.07.2011, with a debt service liability of Rs.2069 crores during the tenure of the loan.

e) To modify the existing PPA in respect of the existing DG Plant with 108 MW to 350 MW Gas Based Combined Cycle Power Plant with BESCOM.

By Order and in the Name of the Governor of Karnataka,

**K.L.RAMACHANDRA**

Deputy Secretary to Government,

Energy Department

**PR. 651**

**SC.50**

## ಆರ್ಥಿಕ ಸಚಿವಾಲಯ

### ಸೇರ್ಪಡೆ

**ಸಂಖ್ಯೆ:ಆಇ 2 ಸೇನಿಸೇ 2014 ಬೆಂಗಳೂರು, ದಿನಾಂಕ: 5.8.2014**

ಸರ್ಕಾರಿ ಆದೇಶ ಸಂಖ್ಯೆ: ಆಇ 03 ಸೇನಿಸೇ 2010 ದಿನಾಂಕ: 15.4.2011ರ ಆದೇಶ ಭಾಗದ (i) ರ ನಂತರದಲ್ಲಿ ಈ ಕೆಳಗಿನ ವಾಕ್ಯವನ್ನು ಸೇರಿಸಿದೆ.

"ಆದಾಗ್ಯೂ, ಸಾರ್ವಜನಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಹೊಸ ವ್ಯಾಖ್ಯಾನಿಸಿದ ಅಂಶದಾಯಿ ಕೊಡುಗೆ ಯೋಜನೆಯಡಿ ಬರುವ ಸರ್ಕಾರಿ ಶಿಕ್ಷಕರು ಸೇವೆಯಲ್ಲಿರುವಾಗಲೇ ಮೃತರಾದ ಸಂದರ್ಭದಲ್ಲಿ, ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಸಂಬಂಧಿಸಿದಂತೆ ಆಯಾ ಶೈಕ್ಷಣಿಕ ಜಿಲ್ಲೆಯ ಉಪ ನಿರ್ದೇಶಕರು, ಪ್ರೌಢಶಾಲಾ ಶಿಕ್ಷಕರಿಗೆ ಸಂಬಂಧಿಸಿದಂತೆ ವಿಭಾಗೀಯ ಕಾರ್ಯದರ್ಶಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಹಾಗೂ ಪದನಿಮಿತ್ತ ಸಹನಿರ್ದೇಶಕರು, ಬೆಳಗಾಂ ಮತ್ತು ಮೈಸೂರು ಹಾಗೂ ಬೆಂಗಳೂರು ಮತ್ತು ಗುಲ್ಬರ್ಗದ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಕಛೇರಿಯಲ್ಲಿನ ಸಹನಿರ್ದೇಶಕರುಗಳು, ಮೇಲೆ ತಿಳಿಸಿದ ವಿಧಿವಿಧಾನಗಳನ್ನು ಪಾಲಿಸಿ ಅರ್ಹ ಮೊತ್ತವನ್ನು ಅಧೀಕರಿಸಲು ಸಕ್ಷಮರಾಗಿರುತ್ತಾರೆ".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಸ್. ಗೋಪಾಲಕೃಷ್ಣ**

ಸರ್ಕಾರದ ಜಂಟಿ ಕಾರ್ಯದರ್ಶಿ (ಸೇವೆಗಳು–1),

ಆರ್ಥಿಕ ಇಲಾಖೆ.

**PR.652**

**SC- 50**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಸಿಆಸುಇ 70 ಇಆಇ 2014 ಬೆಂಗಳೂರು, ದಿನಾಂಕ: 16–08–2014**

**ವಿಷಯ :** 2014–15ನೇ ಸಾಲಿಗಾಗಿ ಕೇಂದ್ರ ಸರ್ಕಾರ ನೀಡುವ ರಾಷ್ಟ್ರೀಯ ಇ–ಆಡಳಿತ ಪ್ರಶಸ್ತಿಗಳಿಗಾಗಿ ನಾಮ ನಿರ್ದೇಶನಗಳನ್ನು ಕಳುಹಿಸುವ ಬಗ್ಗೆ.

**ಓದಲಾಗಿದೆ :** 1. ಕೇಂದ್ರ ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ, ಸಾರ್ವಜನಿಕ ಕುಂದು ಕೊರತೆ ಮತ್ತು ಪಿಂಚಣಿಗಳ ಮಂತ್ರಾಲಯ, ಆಡಳಿತ ಸುಧಾರಣೆ ಮತ್ತು ಸಾರ್ವಜನಿಕ ಕುಂದು ಕೊರತೆಗಳ ಇಲಾಖೆ, ನವದೆಹಲಿ, ಇವರ ದಿನಾಂಕ: 21.07.2014ರ ಅ.ಸ. ಪತ್ರ ಸಂಖ್ಯೆ:13015/2/2014–ಇ–ಜಿಓವಿ(ಬಿ) ಮತ್ತು ಅದಕ್ಕೆ ಲಗತ್ತಿಸಿದ ಅದೇ ಸಂಖ್ಯೆಯ, ಅವರ ದಿನಾಂಕ: 27.06.2014ರ ಪತ್ರ

2. ದಿನಾಂಕ: 19.07.2013ರ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 62 ಇಆಇ 2013(2)

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ, ಕೇಂದ್ರ ಸರ್ಕಾರದ ದಿನಾಂಕ: 21.07.2014ರ ಅ.ಸ ಪತ್ರದ ಮತ್ತು ಅದಕ್ಕೆ ಲಗತ್ತಿಸಿದ ದಿನಾಂಕ: 27.06.2014ರ ಪತ್ರದ ಪ್ರತಿಗಳನ್ನು ಅವುಗಳ ಅಡಕದೊಂದಿಗೆ ಈ ಸುತ್ತೋಲೆಗೆ ಲಗತ್ತಿಸಿದೆ. ಅದು ಸ್ವಯಂವೇದ್ಯವಾಗಿರುತ್ತದೆ. 2014–15ನೇ ಸಾಲಿಗಾಗಿ ಕೇಂದ್ರ ಸರ್ಕಾರ ನೀಡುವ ರಾಷ್ಟ್ರೀಯ ಇ–ಆಡಳಿತ ಪ್ರಶಸ್ತಿಗಾಗಿ ನಾಮನಿರ್ದೇಶನಗಳನ್ನು ಸದರಿ ಅ.ಸ. ಪತ್ರದನ್ವಯ ಆಹ್ವಾನಿಸಲಾಗಿದೆ. ಈ ಕುರಿತು ಹೆಚ್ಚಿನ ಮಾಹಿತಿಯನ್ನು **http://darpg.gov.in** ಈ ವೆಬ್‌ಸೈಟ್‌ಯಿಂದ ಪಡೆಯಬಹುದಾಗಿದೆ.

2. **ಸದರಿ ಪ್ರಶಸ್ತಿಗಳಿಗಾಗಿ ನಾಮನಿರ್ದೇಶನಗಳನ್ನು ಕಳುಹಿಸಲು ದಿನಾಂಕ: 31.08.2014 ಕೊನೆಯ ದಿನಾಂಕವಾಗಿರುತ್ತದೆ.**

3. ಪ್ರಸ್ತಾಪಿತ ನಾಮನಿರ್ದೇಶನಗಳನ್ನು ಮೇಲೆ (2)ರಲ್ಲಿ ಉಲ್ಲೇಖಿಸಿದ ದಿನಾಂಕ: 19.07.2013ರ ಆದೇಶದನ್ವಯ ರಚಿಸಲಾದ, ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿನ ಸಮಿತಿಯ ಮುಂದೆ ಮಂಡಿಸಬೇಕಾಗಿದೆ. ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಇ–ಆಡಳಿತ ಕೇಂದ್ರ, ಬಹುಮಹಡಿಗಳ ಕಟ್ಟಡ, ಬೆಂಗಳೂರು–560001, ಇವರು ಸದರಿ ಸಮಿತಿಯ ಸದಸ್ಯ–ಕಾರ್ಯದರ್ಶಿಯಾಗಿರುತ್ತಾರೆ. ಆದುದರಿಂದ ಪ್ರಸ್ತಾಪಿತ ನಾಮನಿರ್ದೇಶನಗಳನ್ನು ಆನ್‌ಲೈನ್ ಮೂಲಕ ಅವರಿಗೆ **ceoceg@karnataka.gov.in** ಈ ಇ–ಮೇಲ್ ವಿಳಾಸಕ್ಕೆ ಕಳುಹಿಸಲು ಕೋರಿದೆ.

4. ಕರ್ನಾಟಕ ಸಚಿವಾಲಯದ ಆಯಾಯ ಆಡಳಿತ ಇಲಾಖೆಯ ವ್ಯಾಪ್ತಿಯೊಳಗೆ ಬರುವ ಸಂಬಂಧಿಸಿದ ಕ್ಷೇತ್ರ ಇಲಾಖೆ, ಸ್ಥಳೀಯ ಸಂಸ್ಥೆ, ಸಾರ್ವಜನಿಕ ಉದ್ದಿಮೆ ಇತ್ಯಾದಿಗಳ ಗಮನಕ್ಕೆ ಈ ಸೂಚನೆಗಳನ್ನು ತರಲು ಹಾಗೂ ಸದರಿ ಪ್ರಶಸ್ತಿಗಾಗಿ ನಾಮನಿರ್ದೇಶನಗಳನ್ನು ಕೇಂದ್ರ ಸರ್ಕಾರದ ನಿಗದಿತ ಮಾರ್ಗಸೂಚಿಗಳನ್ವಯ ಹಾಗೂ ಕಂಡಿಕೆ 3ರನ್ವಯ ತಿಳಿಸಿದ ಕಾರ್ಯವಿಧಾನದಂತೆ ಕಳುಹಿಸುವುದನ್ನು ಖಚಿತಪಡಿಸಿಕೊಳ್ಳಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರುಗಳನ್ನು ಈ ಮೂಲಕ ಕೋರಿದೆ.

**ಎಸ್. ವೀಣಾ**
ಪೀಠಾಧಿಕಾರಿ–1,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಇ–ಆಡಳಿತ)

**PR.662**
**SC- 400**

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯದ ಯಾದಗಿರಿ ಜಿಲ್ಲೆಯಲ್ಲಿ ಫಿಯೆಟ್ ಭೋಗಿ ಕಾರ್ಖಾನೆ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಮೂಅಇ 151 ರಾರಾಹೆ 2013, ಬೆಂಗಳೂರು, ದಿನಾಂಕ: 09.01.2014.
2. ಸರ್ಕಾರದ ಆದೇಶ ಸಂಖ್ಯೆ: ಮೂಅಇ 151 ರಾರಾಹೆ 2013, ಬೆಂಗಳೂರು, ದಿನಾಂಕ 20.01.2014.
3. ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕಾರ್ಯನಿರ್ವಾಹಕ ಸದಸ್ಯರು, KIADB ಇವರ ಪತ್ರ ಸಂಖ್ಯೆ: IADB/HO/Allot/JD/20821/14908/13-14, ದಿನಾಂಕ:24.01.2014.
4. ಸರ್ಕಾರದ ಪತ್ರ ಸಂಖ್ಯೆ: ಮೂಅಇ 151 ರಾರಾಹೆ 2013, ಬೆಂಗಳೂರು, ದಿನಾಂಕ: 25.01.2014.
5. ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕಾರ್ಯನಿರ್ವಾಹಕ ಸದಸ್ಯರು, KIADB ಇವರ ಪತ್ರ ಸಂಖ್ಯೆ: ಕೆಐಎಡಿಬಿ/ಕೇಂ.ಕ/ಜಂ.ನಿ/20821/1079/2014–14, ದಿನಾಂಕ:30.04.2014.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರದ ಪತ್ರದಲ್ಲಿ ಯಾದಗಿರಿ ಜಿಲ್ಲೆಯಲ್ಲಿ ಫಿಯೆಟ್ ಭೋಗಿ ತಯಾರಿಕಾ ಕಾರ್ಖಾನೆ ಸ್ಥಾಪಿಸಲು 150 ಎಕರೆ ಭೂಮಿಯನ್ನು ಉಚಿತವಾಗಿ ನೀಡಲು ಸರ್ಕಾರದ ಸಹಮತಿಯನ್ನು ಅಧ್ಯಕ್ಷರು, ರೈಲ್ವೆ ಮಂಡಳಿ, ರೈಲ್ವೆ ಮಂತ್ರಾಲಯ, ಕೇಂದ್ರ ಸರ್ಕಾರ ಇವರಿಗೆ ತಿಳಿಸಲಾಗಿದೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರದ ಆದೇಶದಲ್ಲಿ ಈ ಯೋಜನೆಯ ಸಂಪೂರ್ಣ ವೆಚ್ಚವನ್ನು ಕೇಂದ್ರ ಸರ್ಕಾರದ ರೈಲ್ವೆ ಮಂತ್ರಾಲಯವು ಭರಿಸಿ ಯಾದಗಿರಿ ಜಿಲ್ಲೆಯಲ್ಲಿ ಫಿಯೆಟ್ ರೈಲು ಬೋಗಿ ಕಾರ್ಖಾನೆ ತಯಾರಿಸಲು ಹಾಗೂ ಈ ಕಾರ್ಖಾನೆಯ ಸ್ಥಾಪನೆಗಾಗಿ ಅಗತ್ಯವಿರುವ 150 ಎಕರೆ ಭೂಮಿಯನ್ನು ಕರ್ನಾಟಕ ರಾಜ್ಯ ಸರ್ಕಾರದಿಂದ ಉಚಿತವಾಗಿ ನೀಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

3. ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕಾರ್ಯನಿರ್ವಾಹಕ ಸದಸ್ಯರು, KIADB, ಬೆಂಗಳೂರು ಇವರು ಎಲ್.ಹೆಚ್.ಬಿ. ಮಾದರಿಯ ಫಿಯೆಟ್ ಬೋಗಿ ತಯಾರಿಸುವ ಕಾರ್ಖಾನೆಗೆ ಅಗತ್ಯವಿರುವ 150 ಎಕರೆ ಜಮೀನನ್ನು ಯಾದಗಿರಿ ಜಿಲ್ಲೆಯ ಬಡಿಯಾಲ್ ಮತ್ತು ಕಡೆಚೂರ್ ಗ್ರಾಮಗಳಲ್ಲಿ ಸರ್ವೆ ನಂ.ಗಳನ್ನು ಗುರುತಿಸಿ ಮೂಲಸೌಕರ್ಯ ಅಭಿವೃದ್ಧಿ ಇಲಾಖೆಗೆ ಹಂಚಿಕೆ ಮಾಡಲಾಗಿದೆ ಈ ಹಂಚಿಕೆಗಾಗಿ ರೂ. 15.01 ಕೋಟಿಗಳ ವೆಚ್ಚವನ್ನು ಕೆ.ಐ.ಎ.ಡಿ.ಬಿ, ಗೆ ಪಾವತಿಸುವಂತೆ ಮತ್ತು ಸದರಿ ಜಮೀನುಗಳನ್ನು ಭೌತಿಕವಾಗಿ ಯಾರಿಗೆ ಹಸ್ತಾಂತರಿಸಬೇಕೆಂಬ ಬಗ್ಗೆ ನಿರ್ದೇಶನ ನೀಡುವಂತೆ ಕೋರಿರುತ್ತಾರೆ.

4. ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಸರ್ಕಾರದ ಪತ್ರದಲ್ಲಿ ಕೇಂದ್ರ ರೈಲ್ವೆ ಮಂತ್ರಾಲಯವು ಯಾದಗಿರಿ ಜಿಲ್ಲೆಯಲ್ಲಿ ಸ್ಥಾಪಿಸಲು ಉದ್ದೇಶಿಸಿರುವ ಎಲ್.ಹೆಚ್.ಬಿ. ಮಾದರಿಯ ಫಿಯೆಟ್ ಬೋಗಿ ತಯಾರಿಸುವ ಕಾರ್ಖಾನೆಗೆ ಅಗತ್ಯವಿರುವ 150 ಎಕರೆ ಭೂಮಿಯನ್ನು Deputy Executive Engineer (Construction), South Central Railway, Secunderabad ಇವರಿಗೆ ಹಸ್ತಾಂತರಿಸುವಂತೆ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಹಾಗೂ ಕಾರ್ಯನಿರ್ವಾಹಕ ಸದಸ್ಯರು ಕೆ.ಐ.ಎ.ಡಿ.ಬಿ. ಇವರಿಗೆ ನಿರ್ದೇಶನ ನೀಡಲಾಗಿದೆ.

5. ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕಾರ್ಯನಿರ್ವಾಹಕ ಸದಸ್ಯರು, KIADB, ಬೆಂಗಳೂರು ಇವರು ರೈಲು ಫಿಯೆಟ್ ಬೋಗಿ ಕಾರ್ಖಾನೆಗೆ ಬೇಕಾಗಿರುವ 150.00 ಎಕರೆ ಜಮೀನನ್ನು ಕೇಂದ್ರ ಸರ್ಕಾರದ ರೈಲ್ವೆ ಇಲಾಖೆಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಯಾದಗಿರಿ ಜಿಲ್ಲೆ, ಯಾದಗಿರಿ ತಾಲ್ಲೂಕು ಬಾಡಿಹಾಳ ಗ್ರಾಮ ಹಾಗೂ ಕಡೆಚೂರು ಗ್ರಾಮಗಳಲ್ಲಿ ದಿ:24.01.2014 ರಂದು ಹಂಚಿಕೆ ಮಾಡಿ ದಿ:27.01.2014ರಂದು ಡೆಪ್ಯೂಟಿ ಚೀಫ್ ಪ್ರಾಜೆಕ್ಟ್ ಮ್ಯಾನೇಜರ್ ಸೌತ್‌ಸೆಂಟ್ರಲ್ ರೈಲ್ವೆ ಸಿಕಂದರಾಬಾದ್ ರವರಿಗೆ ಸ್ವಾಧೀನ ಪತ್ರವನ್ನು ನೀಡಲಾಗಿದೆ ಎಂದು ತಿಳಿಸಿ ಈ ಸಂಬಂಧ ಸದರಿ ಜಮೀನುಗಳ ಭೂಸ್ವಾಧೀನ ವೆಚ್ಚ ರೂ.15.01 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

6. ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 151 ರಾರಾಹೆ 2013, ಬೆಂಗಳೂರು ದಿನಾಂಕ: 26-07-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಯಾದಗಿರಿ ಜಿಲ್ಲೆಯಲ್ಲಿ ಫಿಯೆಟ್ ಭೋಗಿ ತಯಾರಿಕಾ ಕಾರ್ಖಾನೆಗೆ ಅವಶ್ಯವಿರುವ 150 ಎಕರೆ ಜಮೀನಿನ ಭೂಸ್ವಾಧೀನ ವೆಚ್ಚ ರೂ. 15.01 ಕೋಟಿಗಳನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕಾರ್ಯನಿರ್ವಾಹಕ ಸದಸ್ಯರು, KIADB, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

**2.** ಈ ಮೊತ್ತದಲ್ಲಿನ ರೂ. 14.01 ಕೋಟಿಗಳನ್ನು 2014-15ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ **"5465-01-190-3-05 (P)-186 Cost Sharing for new Projects – HKRDP** ಯಲ್ಲಿ ಹಾಗೂ ರೂ.1.00 ಕೋಟಿಗಳನ್ನು ಲೆಕ್ಕಶೀರ್ಷಿಕೆ **5465-01-190-3-05(P)-211 investment"** ಇದರ ಅಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

**3.** ಈ ಮೊತ್ತವನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕಾರ್ಯನಿರ್ವಾಹಕ ಸದಸ್ಯರು, KIADB, ಬೆಂಗಳೂರು, ಇವರು ಜಿಲ್ಲಾ ಖಜಾನೆ ಬೆಂಗಳೂರು ಇಲ್ಲಿ ಡ್ರಾ ಮಾಡಲು ಅಧಿಕರಿಸಿದೆ. ಉಪ ನಿರ್ದೇಶಕರು, ಎನ್.ಎಂ.ಸಿ. ಬೆಂಗಳೂರು, ಇವರು ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕಾರ್ಯನಿರ್ವಾಹಕ ಸದಸ್ಯರು, KIADB, ಬೆಂಗಳೂರು ಇವರ ಖಾತೆಗೆ ಅಪ್‌ಲೋಡ್ ಮಾಡುವುದು.

**4.** ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 645 ವೆಚ್ಚ-1/14, ದಿನಾಂಕ:02.07.2014ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**PR.646**

**ರಾಬಿನ್ ವನರಾಜ್. ಜೆ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
**ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.**

## ಇಂಧನ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಇಎನ್ 305 ಸಮನ್ವಯ 2013 ಬೆಂಗಳೂರು, ದಿನಾಂಕ: 01.08.2014**

**ವಿಷಯ :** ಇಲಾಖೆಗಳ ಸೇವೆಗಳನ್ನು ಪಡೆಯುವ ಬಗ್ಗೆ ಪ್ರಮಾಣ ಪತ್ರದ ಬದಲಾಗಿ ಸ್ವಯಂ ಘೋಷಣೆಯನ್ನು ಪಡೆಯುವ ಬಗ್ಗೆ.

**ಓದಲಾಗಿದೆ :** ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಸುತ್ತೋಲೆ ಸಂಖ್ಯೆ: ಸಿಆಸುಇ 183 ನಾಸೇಖಾ 2013, ದಿನಾಂಕ: 16.05.2014

ಕೇಂದ್ರ ಸರ್ಕಾರದ ಎರಡನೇ ಆಡಳಿತ ಸುಧಾರಣಾ ಆಯೋಗವು 'ನಾಗರೀಕ ಸ್ನೇಹಿ ಆಡಳಿತ-ಆಡಳಿತದ ಹೃದಯ' ಎಂಬ ಶೀರ್ಷಿಕೆಯ ಹನ್ನೆರಡನೆಯ ವರದಿಯಲ್ಲಿ ಇತರ ಅಂಶಗಳೊಂದಿಗೆ ಆಡಳಿತ ಪದ್ಧತಿ/ವ್ಯವಹಾರಗಳನ್ನು ಸರಳೀಕರಿಸುವ ಸಂಬಂಧ ಸ್ವಯಂ ದೃಢೀಕರಣ ಪತ್ರವನ್ನು ಅನುಸರಿಸುವಂತೆ ಶಿಫಾರಸ್ಸು ಮಾಡಿದೆ. ಕೇಂದ್ರದ ಎರಡನೇ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳ ಅನುಷ್ಠಾನವನ್ನು ಮೇಲ್ವಿಚಾರಣೆ ಮಾಡಲು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಚಿಸಲಾದ ಮೇಲ್ವಿಚಾರಣಾ ಸಮಿತಿಯು ಈ ಬಗ್ಗೆ ಪರಿಶೀಲಿಸಿ, ವಿವಿಧ ಸೇವೆಗಳನ್ನು ಪಡೆಯಲು ನಾಗರೀಕರು ಸಲ್ಲಿಸುವ ವಿವಿಧ ಅರ್ಜಿ ನಮೂನೆಗಳೊಂದಿಗೆ ದೃಢೀಕರಿಸಿದ ಪ್ರಮಾಣ ಪತ್ರಗಳನ್ನು ಪಡೆಯುವ ಪದ್ಧತಿಯ ಬದಲಾಗಿ ಸ್ವಯಂ ದೃಢೀಕರಿಸಿದ ಪ್ರಮಾಣ ಪತ್ರಗಳನ್ನು ಪಡೆಯಲು ತೀರ್ಮಾನಿಸಿ, ಸರ್ಕಾರವು ಉಲ್ಲೇಖಿತ ಸುತ್ತೋಲೆಯನ್ನು ಹೊರಡಿಸಿದೆ.

ಒಂದು ಪಕ್ಷ ಸ್ವಯಂ ಘೋಷಣೆಗಳಲ್ಲಿ ಏನಾದರು ತಪ್ಪು ಅಥವಾ ಬೇರೆ ರೀತಿ ವ್ಯಾಖ್ಯಾನಿಸಿದ್ದರೆ, ಭಾರತೀಯ ದಂಡ ಸಂಹಿತೆಯಲ್ಲಿ ಕೆಳಕಂಡಂತೆ ಕ್ರಮ ಜರುಗಿಸಲು ಅವಕಾಶಗಳಿವೆ:

- ಸೆಕ್ಷನ್ 177: ಸುಳ್ಳು ಮಾಹಿತಿ ನೀಡಿದರೆ ಆರು ತಿಂಗಳ ಅವಧಿಯವರೆಗೆ ವಿಸ್ತರಿಸಬಹುದಾದ ಸೆರೆಮನೆವಾಸ ಅಥವಾ ಒಂದು ಸಾವಿರ ರೂ.ಗಳವರೆಗೆ ವಿಸ್ತರಿಸಬಹುದಾದ ದಂಡ ಅಥವಾ ಇವೆರಡನ್ನೂ ಅನ್ವಯಿಸುವುದು;
- ಸೆಕ್ಷನ್ 193: ಉದ್ದೇಶಿತವಾಗಿ ಸುಳ್ಳು ಪುರಾವೆ ನೀಡುವುದಕ್ಕೆ 7 ವರ್ಷಗಳವರೆಗೆ ಸೆರೆಮನೆವಾಸ ಅಥವಾ ಸುಳ್ಳು ಸಾಕ್ಷಿ ಸೃಷ್ಟಿಸುವುದಕ್ಕೆ ಮೂರು ವರ್ಷಗಳ ಸೆರೆಮನೆವಾಸ ಮತ್ತು ದಂಡ;
- ಸೆಕ್ಷನ್ 199: ಕಾನೂನಿನಡಿಯಲ್ಲಿ ಪುರಾವೆಯೆಂದು ಸ್ವೀಕರಿಸಬಹುದಾದ ಸ್ವಯಂ ಘೋಷಣೆಯಲ್ಲಿ ಸುಳ್ಳು ಹೇಳಿಕೆಯನ್ನು ನೀಡುವುದಕ್ಕೆ ಏಳು ವರ್ಷಗಳ ಸೆರೆಮನೆವಾಸ;
- ಸೆಕ್ಷನ್ 200: ಅಂತಹ ಘೋಷಣೆಯು ಸುಳ್ಳು ಎಂದು ಗೊತ್ತಿದ್ದರೂ ನಿಜವೆಂದು ಉಪಯೋಗಿಸಿದರೆ ಏಳು ವರ್ಷಗಳವರೆಗೆ ಸೆರೆಮನೆ ವಾಸ;

ಪ್ರಸ್ತಾಪಿತ ನಿಬಂಧನೆಗಳು ಪ್ರಮಾಣ ಪತ್ರಗಳಿಗೆ ಬದಲಾಗಿ ಸ್ವಯಂಘೋಷಣೆಯನ್ನು ದುರ್ಬಳಕೆ ಮಾಡಿ ಉಪಯೋಗಿಸಿಕೊಳ್ಳುವುದಕ್ಕೆ ನಾಗರೀಕರು ಹಾಗೂ ಅಧಿಕಾರಿ/ಸಿಬ್ಬಂದಿಗೆ ನಿರ್ಬಂಧವಾಗಿರುತ್ತವೆ.

ಆದುದರಿಂದ, ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಇಂಧನ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ನಿಗಮ/ಮಂಡಳಿ/ಇಲಾಖೆಗಳಲ್ಲಿ ಪ್ರಮಾಣ ಪತ್ರಗಳಿಗೆ ಶಾಸನ ಬದ್ಧವಾದ ಬಾಧ್ಯತೆಯಿರುವ ಸೇವೆಗಳನ್ನು ಹೊರತುಪಡಿಸಿ, ಇನ್ನುಳಿದ ಸೇವೆಗಳನ್ನು ಪಡೆಯಲು ನಾಗರೀಕರಿಂದ ಪ್ರಮಾಣ ಪತ್ರಗಳ ಬದಲಾಗಿ ಸ್ವಯಂ ಘೋಷಿತ ಪ್ರಮಾಣ ಪತ್ರಗಳನ್ನು ಅರ್ಜಿಗಳ ಜೊತೆಗೆ ಪಡೆಯಲು ನಿರ್ದೇಶಿಸಿದೆ ಈ ಬಗ್ಗೆ ನಾಗರೀಕರ ತಿಳುವಳಿಕೆಗಾಗಿ ಸೂಕ್ತ ಪ್ರಕಟನೆಯನ್ನು ಹೊರಡಿಸಬೇಕೆಂದು ತಿಳಿಸಲಾಗಿದೆ.

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,

**PR.647**

**ಇಂಧನ ಇಲಾಖೆ.**

## ಇಂಧನ ಸಚಿವಾಲಯ

**ವಿಷಯ :** ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ ತಾಂತ್ರಿಕ ಮತ್ತು ತಾಂತ್ರಿಕೇತರ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 47 ಇಬಿಎಸ್ 2010 ದಿನಾಂಕ: 29.06.2012.
2. ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ಸಿಸ1/38373/13-14 ದಿನಾಂಕ: 28.11.2013.

**ಪ್ರಸ್ತಾವನೆ:-**

ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಪ್ರಮುಖ ಕಾರ್ಯವು ರಾಜ್ಯದಲ್ಲಿ ಸ್ಥಾಪಿತವಾಗಿರುವ ಯಾವುದೇ ಕಾರ್ಖಾನೆ, ವಿದ್ಯುತ್ ಉತ್ಪಾದನಾ ಕೇಂದ್ರಗಳು, ಬಹುಮಹಡಿ ಕಟ್ಟಡಗಳು, ಚಲನಚಿತ್ರ ಮಂದಿರ, ಪ್ರದರ್ಶನಗಳು, ಲಿಫ್ಟ್‌ಗಳು, ಟ್ರಾನ್ಸ್‌ಫಾರ್ಮರ್‌ಗಳು, ಜನರೇಟರ್‌ಗಳು ಮುಂತಾದವುಗಳ ಪರಿಶೀಲನೆ ಮತ್ತು ಪ್ರಮಾಣೀಕರಿಸುವ ಕಾರ್ಯವನ್ನು ಕಡ್ಡಾಯವಾಗಿ ಕೈಗೊಳ್ಳುವುದಾಗಿದೆ. ರಾಜ್ಯದಲ್ಲಿ ವಿದ್ಯುತ್ ಸ್ಥಾವರಗಳು ದಿನೇದಿನಕ್ಕೆ ಅತೀ ಹೆಚ್ಚಾಗುತ್ತಿದ್ದು, ಇಲಾಖೆಯಲ್ಲಿನ ಅಧಿಕಾರಿ/ನೌಕರರ ಮೇಲೆ ಕೆಲಸದ ಒತ್ತಡ ಅತೀ ಹೆಚ್ಚಾಗಿದ್ದು ಸಾರ್ವಜನಿಕರ ಹಿತ ದೃಷ್ಟಿಯಿಂದ ಕೈಗೊಳ್ಳಬೇಕಾದ ಅಗತ್ಯ ಸೇವೆಗಳನ್ನು ನಾಗರೀಕ ಸನ್ನದ್ದು ಹಾಗೂ ಸೇವಾ ಖಾತರಿ ಅಧಿನಿಯಮದಡಿಯಲ್ಲಿ ನಿಗಧಿಪಡಿಸಲಾಗಿರುವ ಕಾಲಾವಕಾಶದೊಳಗೆ ಮಾಡಬೇಕಾಗುತ್ತದೆ. ಈ ಕಾರಣಗಳಿಂದಾಗಿ ಉಲ್ಲೇಖ (1) ರಲ್ಲಿನ ಆದೇಶದಲ್ಲಿ 50 ತಾಂತ್ರಿಕ ಹಾಗೂ 10 ತಾಂತ್ರಿಕೇತರ ಹುದ್ದೆಗಳನ್ನು ಸೃಜಿಸಲಾಗಿತ್ತು. ಈ ಆದೇಶದಲ್ಲಿ ಐದು ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಗಳನ್ನು ಸೃಜಿಸಿದ್ದು, ಈ ಹುದ್ದೆಗಳನ್ನು ಬೆಂಗಳೂರಿನಲ್ಲಿ ಮೂರು, ಮೈಸೂರು ಹಾಗೂ ಧಾರವಾಡದಲ್ಲಿ ತಲಾ ಒಂದು ಹುದ್ದೆಯನ್ನು ತೆರೆಯಲಾಗಿದೆ.

ಮಂಗಳೂರು ವಿದ್ಯುತ್ ಸರಬರಾಜು ಸಂಸ್ಥೆಯ ವ್ಯಾಪ್ತಿಗೆ ಮಂಗಳೂರು, ಉಡುಪಿ, ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳನ್ನೊಳಗೊಂಡಿದ್ದು, ಈ ಸ್ಥಳಗಳಿಂದ ಮೈಸೂರು ನಗರಕ್ಕೆ ಸಾರ್ವಜನಿಕ ಕೆಲಸಗಳಿಗೆ ಬಂದು ಹೋಗಲು ತುಂಬ ದೂರವಾಗುತ್ತದೆ ಹಾಗೂ ಸಾರ್ವಜನಿಕರಿಗೆ ಅನಾನುಕೂಲವಾಗುತ್ತಿದೆ. ಅಲ್ಲದೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಮೆಸ್ಕಾಂಗೆ ಸಂಬಂಧಿಸಿದ ಎಲ್ಲಾ 110 ಕೆ.ವಿ.ಎ ವಿದ್ಯುತ್ ಸ್ಥಾವರಗಳ ತಪಾಸಣಾ ಮತ್ತು ಅನುಮೋದನಾ ಪ್ರಾಧಿಕಾರವು ಪ್ರಾಂತೀಯ ಅಧಿಕಾರಿಗಳಿಗೆ ಪತ್ಯಾಯೋಜಿಸಲಾಗಿರುವುದರಿಂದ ಹಾಗೂ ಮಂಗಳೂರು ನಗರವು ಅತೀ ವೇಗದಲ್ಲಿ ಬೆಳೆಯುತ್ತಿದ್ದು, ರಾಷ್ಟ್ರೀಯ ವಿಮಾನ ನಿಲ್ದಾಣ, ಮಂಗಳೂರು-ಮುಂಬೈ ಕೊಂಕಣ ರೈಲ್ವೆ ಹಾಗೂ ಕೇರಳ ಬೆಂಗಳೂರು ಕಡೆ ರೈಲ್ವೆ ಸಂಪರ್ಕ ಇತ್ಯಾದಿಗಳನ್ನು ಶೀಘ್ರವಾಗಿ ಬೆಳೆಯುತ್ತಿರುವುದರಿಂದ ಮಂಗಳೂರಿನಲ್ಲಿ ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಯನ್ನು/ಸೃಜಿಸಲು ಮುಖ್ಯ ವಿದ್ಯುತ್ ಪರಿವೀಕ್ಷಕರು ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ, ಅದೇ ರೀತಿ ಗುಲ್ಬರ್ಗಾ ವಿದ್ಯುತ್ ಸರಬರಾಜು ಸಂಸ್ಥೆಯ ವ್ಯಾಪ್ತಿಯು ಸಹ ಬೀದರ್, ಗುಲ್ಬರ್ಗಾ, ಯಾದಗಿರಿ, ರಾಯಚೂರು, ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳನ್ನೊಳಗೊಂಡಿದ್ದು, ಸದರಿ ಜಿಲ್ಲೆಗಳಿಂದ ಧಾರವಾಡ ನಗರಕ್ಕೆ ಸಾರ್ವಜನಿಕ ಕೆಲಸ ಕಾರ್ಯಗಳಿಗೆ ಬಂದು ಹೋಗಲು ತುಂಬಾ ದೂರವಿದ್ದು, ಸಾರ್ವಜನಿಕರಿಗೆ ಅನಾನುಕೂಲ ವಾಗಿರುವುದರಿಂದ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಮತ್ತು ಜೆಸ್ಕಾಂಗೆ ಸಂಬಂಧಿಸಿದ ಎಲ್ಲಾ 110 ಕೆ.ವಿ.ಎ ವರೆಗೆ ವಿದ್ಯುತ್ ಸ್ಥಾವರಗಳ ತಪಾಸಣಾ ಮತ್ತು ಅನುಮೋದನೆ ಅಧಿಕಾರವನ್ನು ಪ್ರಾಂತೀಯ ಅಧಿಕಾರಿಗಳಿಗೆ ಪ್ರತ್ಯಾಯೋಜಿಸಿರುವುದರಿಂದ ಹಾಗೂ ಭಾರತದ ಸಂವಿಧಾನದ ಅನುಚ್ಛೇದ 371(ಜೆ)(2)(ಬಿ) ರನ್ವಯ ವಿಶೇಷ ಸ್ಥಾನಮಾನ ಕಲ್ಪಿಸಿದ್ದು, ಗುಲ್ಬರ್ಗಾ ಸರಬರಾಜು ಸಂಸ್ಥೆಗೆ ಸಂಬಂಧಿಸಿದಂತೆ ಒಂದು ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ ಅನಿವಾರ್ಯವಾಗಿದೆ ಎಂದು ಮುಖ್ಯ ವಿದ್ಯುತ್ ಪರಿವೀಕ್ಷಕರು ತಿಳಿಸಿರುತ್ತಾರೆ.

ಮುಖ್ಯ ವಿದ್ಯುತ್ ಪರಿವೀಕ್ಷಕರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ 2 ಹುದ್ದೆಗಳು, ಸಹಾಯಕ ವಿದ್ಯುತ್ ಪರಿವೀಕ್ಷಕರ 2 ಹುದ್ದೆಗಳು, ಲೆಕ್ಕಾಧಿಕಾರಿ 3 ಹುದ್ದೆಗಳು, ಶೀಘ್ರಲಿಪಿಗಾರರ 2 ಹುದ್ದೆಗಳು ಹಾಗೂ ಜವಾನರ 2 ಹುದ್ದೆಗಳನ್ನು ಸೃಜಿಸಲು ಆರ್ಥಿಕ ಇಲಾಖೆಯ ಸಹಮತಿಗಾಗಿ ಸಲ್ಲಿಸಲಾಗಿತ್ತು. ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಿದ ನಂತರ ಆರ್ಥಿಕ ಇಲಾಖೆಯು 2 ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರ ಹುದ್ದೆಗಳನ್ನು, 11 ಸಹಾಯಕ ವಿದ್ಯುತ್ ಪರಿವೀಕ್ಷಕರ ಹುದ್ದೆಗಳನ್ನು 2 ಶೀಘ್ರಲಿಪಿಗಾರರ ಹುದ್ದೆಗಳನ್ನು ಮತ್ತು 9 ಜವಾನರ ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ಭರಿಸಲು ಸಹಮತಿ ನೀಡಿದೆ. ಆರ್ಥಿಕ ಇಲಾಖೆಯ ಸಹಮತಿ ನಂತರ ಇಲಾಖೆಗೆ ಬೇಕಾಗಿರುವ ಅಗತ್ಯ ಹುದ್ದೆಗಳನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 151 ಇಬಿಎಸ್ 2012 (ಭಾಗ-1) ಬೆಂಗಳೂರು ದಿನಾಂಕ: 19-07-2014.**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಗಮನಿಸಿ ವಿದ್ಯುತ್ ಪರಿವೀಕ್ಷಣಾ ಇಲಾಖೆಗೆ ಈ ಕೆಳಗೆ ನಮೂದಿಸಲಾದ ತಾಂತ್ರಿಕ ಮತ್ತು ತಾಂತ್ರಿಕೇತರ ವೃಂದದ ಹುದ್ದೆಗಳನ್ನು ಸೃಜಿಸಿ ಆದೇಶಿಸಿದೆ.

| ಕ್ರಸಂ | ಹುದ್ದೆಗಳು | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ |
|---|---|---|---|
| 1 | ಅಪರ ಮುಖ್ಯ ವಿದ್ಯುತ್ ಪರಿವೀಕ್ಷಕರು | 02 | ಮುಂಬಡ್ತಿ ಮೂಲಕ |
| 2 | ಶೀಘ್ರಲಿಪಿಗಾರರು | 02 | ನೇರ ನೇಮಕಾತಿ |
| 3 | ಜವಾನರು | 02 | ಹೊರಗುತ್ತಿಗೆ ಮುಖಾಂತರ |
| | **ಒಟ್ಟು** | **06** | |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 590 ವೆಚ್ಚ-1/2014 ದಿನಾಂಕ: 11.06.2014 ರಲ್ಲಿ ನೀಡಿದ ಸಹಮತಿಯಂತೆ ಹೊರಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಮೀರ್ ಮಡಿಮನ್**
ಪೀಠಾಧಿಕಾರಿ,
ಇಂಧನ ಇಲಾಖೆ.

**PR.648**
**SC.50**

## ಒಳಾಡಳಿತ ಸಚಿವಾಲಯ

**ವಿಷಯ :** 'ದ ಸಿಗರೇಟ್ ಅಂಡ್ ಅದರ್ ಟೊಬ್ಯಾಕೊ ಪ್ರಾಡಕ್ಟ್ ಆಕ್ಟ್–2003 ಮತ್ತು "ಆಹಾರ ಸುರಕ್ಷತೆ ಮತ್ತು ಗುಣಮಟ್ಟ (ನಿಷೇಧ ಮತ್ತು ಮಾರಾಟ ನಿರ್ಬಂಧ) ನಿಬಂಧನೆಗಳು–2011" ರಡಿ ದಾಖಲಿಸುವ ಪ್ರಕರಣಗಳು ಮತ್ತು ವಿಧಿಸಲಾಗುವ ದಂಡನೆಯ ಅಂಕಿಅಂಶಗಳ ಕ್ರೋಢಿಕೃತ ಮಾಹಿತಿಯನ್ನು ಸಂಗ್ರಹಿಸಲು ನೋಡಲ್ ಅಧಿಕಾರಿಯನ್ನು ನೇಮಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಆಕುಕ 156 ಸಿಜಿಇ 2012, ಬೆಂಗಳೂರು ದಿನಾಂಕ: 04–07–2013.
2. ಸರ್ಕಾರದ ಸುತ್ತೋಲೆ ಸಂಖ್ಯೆ: ಒಇ 35 ಪಿಸಿಬಿ 2013, ಬೆಂಗಳೂರು ದಿನಾಂಕ: 16–09–2013.

ಪ್ರಸ್ತಾವನೆ:–

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ COTPA-2003ರ ಕಾಯ್ದೆಯಡಿ ಸರ್ಕಾರಕ್ಕೆ ಸಲ್ಲಿಸುತ್ತಿರುವ ಮಾಸಿಕ ವರದಿಯಲ್ಲಿ ಗುಟ್ಕಾ ಮತ್ತು ಪಾನ್ ಮಸಾಲ ಪದಾರ್ಥಗಳ ನಿಷೇಧ ಕುರಿತು ತೆಗೆದುಕೊಂಡ ಕ್ರಮವನ್ನು ಸಹ ಅಂದರೆ, ಗುಟ್ಕಾ ತಯಾರಿಕಾ ಘಟಕ ಮತ್ತು ಮಾರಾಟ ಅಂಗಡಿಗಳ ಮೇಲೆ ನಡೆಸಿದ ದಾಳಿಯ ಪ್ರಕರಣಗಳ ಸಂಖ್ಯೆ, ಸಂಗ್ರಹಿಸಿದ ದಂಡ ಹಾಗೂ ವಶಪಡಿಸಿಕೊಳ್ಳಲಾದ ಪದಾರ್ಥಗಳ ವಿವರವನ್ನೊಳಗೊಂಡ ಮಾಹಿತಿಯನ್ನು ನಿಗದಿತ ನಮೂನೆಯಲ್ಲಿ ಅಳವಡಿಸಿ ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ನಗರಾಭಿವೃದ್ಧಿ ಇಲಾಖೆ ಮತ್ತು ಪೊಲೀಸ್ ಮಹಾ ನಿರ್ದೇಶಕರು ಇವರುಗಳಿಗೆ ಕಾಲಕಾಲಕ್ಕೆ ಸಲ್ಲಿಸಲು ಸೂಚಿಸಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಸುತ್ತೋಲೆಯಲ್ಲಿ ಪ್ರತಿ ಮಾಹೆ ನಡೆಯುವ ಮಾಸಿಕ ಅಪರಾಧ ಸಭೆಯಲ್ಲಿ COTPA-2003ರ ಕಾಯ್ದೆಯನ್ನು ಪರಿಶೀಲಿಸುವಂತೆ ಗುಟ್ಕಾ ಮತ್ತು ಪಾನ್ ಮಸಾಲ ಪದಾರ್ಥಗಳ ನಿಷೇಧ ಕಾಯ್ದೆಯನ್ನು ಸಹ ಕೂಡಲೇ ಜಾರಿಗೊಳಿಸಿ ಪರಿಶೀಲಿಸುವಂತೆ ಹಾಗೂ COTPA-2003ರ ಅಂಕಿ ಅಂಶಗಳಂತೆಯೇ ಗುಟ್ಕಾ ನಿಷೇಧ ಕಾಯ್ದೆಯಡಿ ದಾಖಲಾದ ಪ್ರಕರಣಗಳ ಅಂಕಿ ಅಂಶಗಳನ್ನೂ ಸಹ ಒಳಾಡಳಿತ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ನಗರಾಭಿವೃದ್ಧಿ ಇಲಾಖೆ ಮತ್ತು ರಾಜ್ಯ ಅಪರಾಧ ದಾಖಲಾತಿ ವಿಭಾಗ, ಬೆಂಗಳೂರು ಇವರಿಗೆ ನಿಗದಿತ ನಮೂನೆಯಲ್ಲಿ ಪ್ರತಿ ಮಾಹೆಯೂ ತಪ್ಪದೇ ಕಳುಹಿಸುವಂತೆ ಸೂಚಿಸಲಾಗಿರುತ್ತದೆ.

COTPA-2003ರ ಕಾಯ್ದೆಯಡಿ ಸಂಗ್ರಹಿಸಲಾಗುವ ಅಂಕಿ ಅಂಶಗಳು ಮತ್ತು ಗುಟ್ಕಾ ಮತ್ತು ಪಾನ್ ಮಸಾಲ ಪದಾರ್ಥಗಳ ನಿಷೇಧ ಕಾಯ್ದೆಯಡಿ ಸಂಗ್ರಹಿಸಲಾಗುವ ಅಂಕಿ ಅಂಶಗಳ ಮಾಹಿತಿಯನ್ನು ರಾಜ್ಯಾದ್ಯಂತ ಸಂಬಂಧಿಸಿದವರಿಂದ ಪಡೆದು ಕ್ರೋಢಿಕೃತ ಮಾಹಿತಿಯನ್ನು ಸಂಗ್ರಹಿಸುವ ಅವಶ್ಯಕತೆ ಇರುತ್ತದೆ ಮತ್ತು ಅದನ್ನು ಒಳಾಡಳಿತ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ನಗರಾಭಿವೃದ್ಧಿ ಇಲಾಖೆಗೆ ಸಲ್ಲಿಸಬೇಕಾಗಿರುತ್ತದೆ. ಆದ್ದರಿಂದ ಕ್ರೋಢಿಕೃತ ಜಿಲ್ಲಾವಾರು ಮಾಹಿತಿಯನ್ನು ಸಂಗ್ರಹಿಸಿ ಕಾಲಕಾಲಕ್ಕೆ ಸರ್ಕಾರಕ್ಕೆ ಒದಗಿಸಲು ನೋಡಲ್ ಅಧಿಕಾರಿಯ ಅವಶ್ಯಕತೆ ಇರುತ್ತದೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 36 ಪಿಸಿಬಿ 2013, ಬೆಂಗಳೂರು, ದಿನಾಂಕ: 08-04-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 'ದ ಸಿಗರೇಟ್ ಅಂಡ್ ಅದರ್ ಟೊಬ್ಯಾಕೊ ಪ್ರಾಡಕ್ಟ್ ಆಕ್ಟ್–2013' (COTPA-2003) ಮತ್ತು "ಆಹಾರ ಸುರಕ್ಷತೆ ಮತ್ತು ಗುಣಮಟ್ಟ (ನಿಷೇಧ ಮತ್ತು ಮಾರಾಟ ನಿರ್ಬಂಧ) ನಿಬಂಧನೆಗಳು_2011"ರಡಿ ದಾಖಲಿಸುವ ಪ್ರಕರಣಗಳು ಮತ್ತು ವಿಧಿಸಲಾಗುವ ದಂಡನೆಯ ಅಂಕಿ ಅಂಶಗಳ ಕ್ರೋಢಿಕೃತ ಮಾಹಿತಿ ಸಂಗ್ರಹಿಸಲು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು (ಅಪರಾಧಗಳು ಮತ್ತು ತಾಂತ್ರಿಕ ಸೇವೆಗಳು), ನೃಪತುಂಗ ರಸ್ತೆ, ಬೆಂಗಳೂರು ಇವರನ್ನು ನೋಡಲ್ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.

ಇವರು COTPA-2003ರಡಿ ಮತ್ತು "ಆಹಾರ ಸುರಕ್ಷತೆ ಮತ್ತು ಗುಣಮಟ್ಟ (ನಿಷೇಧ ಮತ್ತು ಮಾರಾಟ ನಿರ್ಬಂಧ) ನಿಬಂಧನೆಗಳು–2011"ರಡಿ ದಾಖಲಿಸುವ ಎಲ್ಲಾ ಪ್ರಕರಣಗಳು ಹಾಗೂ ದಂಡನೆಗಳ ವಿವರಗಳನ್ನು ರಾಜ್ಯದ ಎಲ್ಲಾ ಘಟಕಾಧಿಕಾರಿಗಳಿಂದ ಪಡೆದು ಕ್ರೋಢಿಕೃತ ವರದಿಯನ್ನು ಪ್ರತಿ ಮಾಹೆಯ 10ನೇ ತಾರೀಖಿನೊಳಗೆ ಹಿಂದಿನ ತಿಂಗಳ ವಿವರಗಳನ್ನು ಒಳಾಡಳಿತ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಹಾಗೂ ನಗರಾಭಿವೃದ್ಧಿ ಇಲಾಖೆಗಳಿಗೆ ಕಳುಹಿಸುವಂತೆ ಸೂಚಿಸಲಾಗಿದೆ.

ಈ ಬಗ್ಗೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ತಮ್ಮ ಅಧೀನಾಧಿಕಾರಿಗಳಿಗೆ ಸೂಕ್ತ ಆದೇಶ/ನಿರ್ದೇಶನ ನೀಡುವಂತೆ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋವಿಂದಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಅಪರಾಧ).

PR. 564
Sc-100

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹನುಮೇಶ್, ಡಿವೈ.ಎಸ್.ಪಿ., ಸಿ.ಐ.ಡಿ., ಬೆಂಗಳೂರು ಇವರ ಮೇಲ್ಮನವಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು, ಇವರ ಆದೇಶ ಸಂಖ್ಯೆ:ಸಿಬಿ(5)53/2011–12,(ಓ.ಬಿ.ಸಂಖ್ಯೆ:198/2012) ದಿನಾಂಕ:30–11–2012
2) ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ: 10–12–2012
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(5)53/ 2011–12, ದಿನಾಂಕ:06.03.2014
4) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 65 ಸಿಎನ್‌ಎಸ್ 2014 ದಿನಾಂಕ: 21.06.2014

**ಪ್ರಸ್ತಾವನೆ:**

ಶ್ರೀ ಜಿ. ಹನುವೇಶ್ ಡಿವೈ.ಎಸ್.ಪಿ., ಸಿ.ಐ.ಡಿ. ಬೆಂಗಳೂರು (ಇನ್ನೂ ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಬಳ್ಳಾರಿ ಉಪ ವಿಭಾಗದಲ್ಲಿ, ಡಿವೈ.ಎಸ್.ಪಿ., ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಲೋಪ, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗದ ಕಾರಣಗಳ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಜಿ. ಹನುಮೇಶ್, ಡಿವೈ.ಎಸ್.ಪಿ, ಆದ ನೀವು ಬಳ್ಳಾರಿ ಉಪವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ 05.09.2011ರಂದು ಶ್ರೀ ಜನಾರ್ಧನ ರಡ್ಡಿ, ಮಾಜಿ ಸಚಿವರನ್ನು ಸಿ.ಬಿ.ಐ.ರವರು ಬಂಧಿಸಿದ ಹಿನ್ನಲೆಯಲ್ಲಿ ದಿನಾಂಕ 06.09.2011ರಂದು ಬಳ್ಳಾರಿಯಲ್ಲಿ ಕರೆಯಲಾದ ಬಂದ್‌ಗೆ ಸಂಬಂಧಿಸಿದಂತೆ ದಿನಾಂಕ 06.09.2011ರ ಬೆಳಿಗ್ಗೆ 11–00ರ ಸುಮಾರಿನಲ್ಲಿ ಕೆಲವು ದುಷ್ಕರ್ಮಿಗಳು ಸರ್ಕಾರಿ ಕಛೇರಿಗಳಾದ ಡಿ.ಯು.ಡಿ.ಸಿ., ಆರ್.ಟಿ.ಓ., ಅರಣ್ಯ ಮತ್ತು ಎ.ಸಿ. ಕಛೇರಿಗಳಿಗೆ ನುಗ್ಗಿ ಸರ್ಕಾರದ ಆಸ್ತಿಯನ್ನು ಹಾಳುಗಡೆವಿದ್ದಲ್ಲದೆ, ಸಾರ್ವಜನಿಕ ಬಸ್‌ಗಳಿಗೆ ಕಲ್ಲು ತೂರಿ ಗಲಭೆ ಉಂಟು ಮಾಡುತ್ತಿದ್ದ ಕಾರಣ ಆರೋಪಿಗಳನ್ನು ಕೂಡಲೇ ದಸ್ತಗಿರಿ ಮಾಡುವಂತೆ ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆರವರು ನಿಸ್ತಂತು ಮೂಲಕ ಆದೇಶ ನೀಡಿರುತ್ತಾರೆ. ಬಳ್ಳಾರಿ ಉಪವಿಭಾಗದ ಮೇಲುಸ್ತುವಾರಿ ಅಧಿಕಾರಿಯಾದ ನೀವು ಬಂದ್ ಕಾರಣ ಮುಂಜಾಗ್ರತಾ ಕ್ರಮವಾಗಿ ಸೂಕ್ತ ಬಂದೋಬಸ್ತ್ ಏರ್ಪಡಿಸಿ, ಗಲಭೆಕೋರರನ್ನು ಬಂಧಿಸುವ ಬಗ್ಗೆ ಕ್ರಮ ಜರುಗಿಸದೆ, ಯಾರನ್ನೂ ಬಂಧಿಸಿರುವುದಿಲ್ಲವೆಂದು ನಿಸ್ತಂತು ಕೊಠಡಿಗೆ ಸಂದೇಶ ನೀಡಿರುತ್ತೀರಿ. ಆದರೆ, ಎಸ್.ಪಿ., ಸರ್ಕಲ್‌ನಲ್ಲಿ ಕೆಲವು ದುಷ್ಕರ್ಮಿಗಳನ್ನು ಬಂಧಿಸಲಾಗಿದೆ ಎಂದು, ಖಾಲಿ ವ್ಯಾನನ್ನು ಕಳುಹಿಸಿಕೊಡುವಂತೆ ಸಂದೇಶ ಬಂದಿದ್ದರಿಂದ, ಅಡಿಷನಲ್ ಎಸ್.ಪಿ., ಬಳ್ಳಾರಿ ಜಿಲ್ಲೆ ರವರು ಖಾಲಿ ವ್ಯಾನನ್ನು ಸ್ಥಳಕ್ಕೆ ಕಳುಹಿಸಿರುತ್ತಾರೆ. ಅಂದರೆ, ದುಷ್ಕರ್ಮಿಗಳು ಸರ್ಕಾರಿ ಕಛೇರಿಗಳಿಗೆ ನುಗ್ಗಿ, ದೊಂಬಿ–ಗಲಭೆ ನಡೆಸುತ್ತಿದ್ದರೂ ಸಹ ಮೇಲಾಧಿಕಾರಿಗಳಿಗೆ ಯಾವುದೇ ರೀತಿಯ ಮಾಹಿತಿಯನ್ನು ನೀಡದೆ, ಅಹಿತಕರ ಘಟನೆಗಳ ಬಗ್ಗೆ ಮೇಲಾಧಿಕಾರಿಗಳನ್ನು ಅಂಧಕಾರದಲ್ಲಿರಿಸಿ, ನಿಮ್ಮ ಕರ್ತವ್ಯದಲ್ಲಿ ಕರ್ತವ್ಯಲೋಪ, ಅತೀವ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗ ಪಡಿಸಿಕೊಂಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷದ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 30.11.2012ರ ಆದೇಶದಲ್ಲಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವೇತನಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಿ ಆದೇಶಿಸಿದೆ.

ಈ ಆದೇಶದ ವಿರುದ್ಧ ಸರ್ಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ಎಸ್.ಪಿ. ಸರ್ಕಲ್ ಬಳಿ ದ್ವಿಚಕ್ರ ವಾಹನದಲ್ಲಿ ಕೆಲವು ಕಿಡಿಗೇಡಿಗಳು ಕಲ್ಲು ತೂರಾಟ ಮಾಡುತ್ತಿದ್ದಾರೆಂದು ಇವರ ದಸ್ತಗಿರಿಗೆ ವ್ಯಾನ್ ಕಳುಹಿಸಲು ತಿಳಿಸಿದ್ದರೂ ಕಂಟ್ರೋಲ್ ರೂಂನಿಂದ ಯಾವುದೇ ಕ್ರಮ ವಹಿಸದ ಕಾರಣ ಕಿಡಿಗೇಡಿಗಳು ಪರಾರಿಯಾಗಿರುತ್ತಾರೆ. ಇಂಥ ಘಟನೆಗೆ ಡಿವೈ.ಎಸ್.ಪಿ.ಯವರನ್ನು ಹೊಣೆಮಾಡಿರುವುದು ಸಮಂಜಸವಲ್ಲ. ಗಲಭೆ ನಡೆದ ಸ್ಥಳದ ಬ್ರೂಸ್ ಪೇಟೆ ಪಿ.ಐ.ರವರು ಇದಕ್ಕೆ ಹೊಣೆಗಾರರಾಗಿದ್ದು ಪರಾರಿಯಾದ ಕಿಡಿಗೇಡಿಗಳನ್ನು ಒಂದು ದಿನ ವಿಳಂಬವಾಗಿ ಬಂಧಿಸಿರುವ ಹಿನ್ನಲೆಯಲ್ಲಿ ಇವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿದ್ದ ದಂಡನೆಯ ಬಗ್ಗೆ ಪರಿಶೀಲಿಸಿ ಇವರು ಬಂದೋಬಸ್ತ್ ಕರ್ತವ್ಯದಲ್ಲಿ ನಿರತರಾಗಿದ್ದ ಹಿನ್ನಲೆಯಲ್ಲಿ ಇವರ ದಂಡನೆಯನ್ನು "ವಾಗ್ದಂಡನೆ"ಯಾಗಿ ಅದೇಶಿಸಲಾಗಿರುತ್ತದೆ. (ಸರ್ಕಾರದ ಆದೇಶ ಸಂಖ್ಯೆ: ಒಇ 70 ಪೊಸಿಅ 2013 ದಿನಾಂಕ 19.02.2014) ಪಿ.ಐ.ರವರ ಮೇಲಾಧಿಕಾರಿಯಾದ ಆ.ಪೊ.ಅ.ರವರು ಸಹಾ ಬಂದೋಬಸ್ತ್ ಕಾರ್ಯದಲ್ಲಿ ಸಂಪೂರ್ಣ ನಿರತರಾಗಿರುವುದರಿಂದ ಹಾಗೂ ಗಲಭೆಕೋರರನ್ನು ಬಂಧಿಸುವಲ್ಲಿ ಪಿ.ಐ.ರವರೊಂದಿಗೆ ಸಹಕರಿಸಿರುವುದು ಸಾಬೀತಾಗಿದೆ. ಈ ಹಿನ್ನೆಲೆಯಲ್ಲಿ ಅರ್ಜಿದಾರರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 43 ಪೊಸಿಅ 2014 ಬೆಂಗಳೂರು, ದಿನಾಂಕ:01.07.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹನುಮೇಶ್, ಡಿವೈ.ಎಸ್.ಪಿ., ಸಿ.ಐ.ಡಿ., ಬೆಂಗಳೂರು ಇವರಿಗೆ ಶಿಸ್ತುಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ಮಾರ್ಪಡಿಸಿ ಕರ್ನಾಟಕ ಪೊಲೀಸ್ ಕಾಯ್ದೆಯ ಸೆಕ್ಷನ್ 23(1)(a)(i)ರನ್ವಯ ಇವರಿಗೆ ವಾಗ್ದಂಡನೆ (censure) ವಿಧಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೆಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಬಿ)

P.R. 565

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ.ಎಸ್ ಮಂಜುನಾಥ್, ಪಿ.ಐ., ಕರ್ನಾಟಕ ಲೋಕಾಯುಕ್ತ, ಕೋಲಾರ ಇವರ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು, ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ(8)68/2012–13 (ಓ.ಬಿ.ಸಂಖ್ಯೆ: 63/2013) ದಿನಾಂಕ: 02.03.2014

2) ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ 04.06.2013

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)68/2012–13 ದಿನಾಂಕ 25.02.2014

4) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 60 ಸಿಎನ್‌ಎಸ್ 2014 ದಿನಾಂಕ: 21.06.2014

**ಪ್ರಸ್ತಾವನೆ:**

ಶ್ರೀ ಎಸ್ ಮಂಜುನಾಥ್, ಪಿ.ಐ., (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಕರ್ನಾಟಕ ಲೋಕಾಯುಕ್ತ, ಕೋಲಾರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಎಸ್ ಮಂಜುನಾಥ್, ಪೊಲೀಸ್ ಇನ್ಸ್‌ಪೆಕ್ಟರ್ ಆದ ನೀವು ಪ್ರಸ್ತುತ ಲೋಕಾಯುಕ್ತ ಪೊಲೀಸ್ ಠಾಣೆ, ಕೋಲಾರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕೋಲಾರ ಜಿಲ್ಲಾ ಲೋಕಾಯುಕ್ತ ಪೊಲೀಸ್ ಠಾಣೆ ಮೊ.ಸಂ. 11/2009 ಕಲಂ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988 ಕಲಂ 7, 13(1)(ಡಿ) ಸಹವಾಚನ ಕಲಂ 13(2) ರಡಿಯಲ್ಲಿ ದಾಖಲಾಗಿರುತ್ತದೆ. ಪ್ರಕರಣದ ಫಿರ್ಯಾದುದಾರರಾದ ಶ್ರೀ ಎಸ್. ಜಯರಾಮಯ್ಯ ರವರು ಜಮೀನು ಖಾತಾ ಮಾಡಿಕೊಡುವ ಸಂಬಂಧ ಶ್ರೀನಿವಾಸಪುರ ತಾಲ್ಲೋಕಿನ ತಹಶೀಲ್ದಾರ್ ಶ್ರೀ ಮಂಜುನಾಥಸ್ವಾಮಿ ಮತ್ತು ರಾಜಪ್ಪ ನಿರೀಕ್ಷಕ ಶ್ರೀ ಶ್ರೀನಿವಾಸಲು ನಾಯ್ಡು ರವರನ್ನು ಭೇಟಿ ಮಾಡಲಾಗಿ ಕ್ರಮವಾಗಿ ರೂ.25000–00 ಮತ್ತು ರೂ. 15000–00ಗಳ ಲಂಚದ ಹಣಕ್ಕಾಗಿ ಒತ್ತಾಯ ಮಾಡಿರುತ್ತಾರೆ. ಮುಂಗಡವಾಗಿ ತಲಾ ರೂ. 5000/–ಗಳನ್ನು ನೀಡಿರುತ್ತಾರೆ. ಮೇಲ್ಕಂಡ ಅಪಾದಿತರುಗಳು ದಿ: 23–12–2009ರ ಬೆಳ್ಳಿಗ್ಗೆ ಫಿರ್ಯಾದುದಾರರ ಮೊಬೈಲ್‌ಗೆ ಕರೆ ಮಾಡಿ ಶ್ರೀನಿವಾಸಪುರದಲ್ಲಿನ ತಹಶೀಲ್ದಾರ್ ರವರ ಕ್ವಾರ್ಟರ್ಸ್ ಬಳಿ ಉಳಿದ ಲಂಚದ ಮೊತ್ತವನ್ನು ನೀಡುವಂತೆ ಒತ್ತಾಯಿಸಿರುವುದನ್ನು ತಮ್ಮ ಮೊಬೈಲ್‌ನಲ್ಲಿ ರೆಕಾರ್ಡ್ ಮಾಡಿರುವುದಾಗಿ ತಾನು ನೀಡಿರುವ ದೂರಿನಲ್ಲಿ ನಮೂದಿಸಲಾಗಿರುತ್ತದೆ. ಆದರೆ ಜವಾಬ್ದಾರಿಯುತ ಅಧಿಕಾರಿಯಾದ ನೀವು ಆಪಾದಿತರುಗಳು ಲಂಚದ ಹಣಕ್ಕಾಗಿ ಒತ್ತಾಯ ಮಾಡಿರುವುದನ್ನು ಫಿರ್ಯಾದುದಾರರ ಮೊಬೈಲ್‌ನಿಂದ ಸಿಡಿಗೆ ವರ್ಗಾಯಿಸಿಕೊಳ್ಳದೇ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆ ವಹಿಸುವ ಮೂಲಕ ಕರ್ತವ್ಯ ಲೋಪವೆಸಗಿರುತ್ತೀರಿ. ಇದರಿಂದಾಗಿ ಆಪಾದಿತರುಗಳು ಲಂಚ ಪ್ರಕರಣದಲ್ಲಿ ಭಾಗಿಯಾಗಿದ್ದವರನ್ನು ಕಾನೂನು ರೀತ್ಯಾ ಮುಂದಿನ ಕ್ರಮ ಜರುಗಿಸುವ ಸಂಬಂಧ ವಿಫಲಗೊಳ್ಳಲು ಕಾರಣಕರ್ತರಾಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 02–03–2013ರ ಆದೇಶದಲ್ಲಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಒಂದು ವರ್ಷ ಕಾಲ ತಡೆಹಿಡಿದು ಆದೇಶಿಸಿದೆ.

ಈ ಆದೇಶದ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ಆ.ಪೊ.ಅ.ರವರ ಮೇಲೆ ಮಾಡಿರುವ ಆರೋಪವು ಸಮಂಜಸವಲ್ಲ ಮತ್ತು ಇದನ್ನು ಸಾಬೀತುಪಡಿಸಲು ಯಾವುದೇ ದಾಖಲೆಗಳಾಗಲೀ, ಸಾಕ್ಷಿಗಳಾಗಲೀ ಇರುವುದಿಲ್ಲ. ಇಲ್ಲಿ ಮುಖ್ಯವಾಗಿ ಫೀರ್ಯಾದುದಾರರ ಅಸಹಕಾರದಿಂದ ಮತ್ತು ಅವರ ನಿರ್ಲಕ್ಷ್ಯತನದಿಂದ ಟ್ರ್ಯಾಪ್ ಪ್ರಕರಣ ವಿಫಲವಾಗಿರುವುದು ಕಂಡು ಬರುತ್ತದೆ. ಇದರಲ್ಲಿ ಆ.ಪೊ.ಅ.ರವರ ಪಾತ್ರವಿಲ್ಲದಿರುವುದನ್ನು ಗಮನಿಸಲಾಗಿದೆ. ಈ ಎಲ್ಲಾ ಕಾರಣಗಳಿಂದಾಗಿ ಆ.ಪೊ.ಅ.ರವರು ಸರ್ಕಾರಕ್ಕೆ ಸಲ್ಲಿಸಿದ ಮೇಲ್ಮನವಿಯನ್ನು ಪುರಸ್ಕರಿಸಿ ಆ.ಪೊ.ಅ.ರವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ರದ್ದುಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 71 ಪೊಸಿಅ 2013 ಬೆಂಗಳೂರು, ದಿನಾಂಕ:01.07.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್ ಮಂಜುನಾಥ್, ಪಿ.ಐ., ಕರ್ನಾಟಕ ಲೋಕಾಯುಕ್ತ, ಕೋಲಾರ ಇವರಿಗೆ ಶಿಸ್ತುಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ರದ್ದುಪಡಿಸಿ ಆ.ಪೊ.ಅ.ರವರನ್ನು ನಿರ್ದೋಷಿಯೆಂದು ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಬಿ)

**P.R. 566**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಓ.ಎಂ.ವೆಂಟರಮಣಪ್ಪ, ಎಹೆಚ್‌ಸಿ–36 ಮತ್ತು ಶ್ರೀ ಕೃಷ್ಣಯ್ಯ, ಎಪಿಸಿ–11, ಡಿಎಆರ್, ಕೋಲಾರ ಇವರುಗಳ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ ಇವರ ಆದೇಶ ಸಂಖ್ಯೆ ಡಿ.ಇ:01/2010 (ಓ.ಬಿ.174/2010)ದಿನಾಂಕ 20.12.2010

2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/76/ಶಿಕ್ಷೆ/2010–11 (ಓ.ಬಿ.ಸಂಖ್ಯೆ:85/2011–12) ದಿನಾಂಕ: 05.11.2011 ಮತ್ತು ಅಪೀಲು/78/ಶಿಕ್ಷೆ/2010–11 (ಓ.ಬಿ.ಸಂಖ್ಯೆ:86/2011–12)ದಿನಾಂಕ: 05.12.2011

3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 28.09.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2) 61/2013–14 ದಿನಾಂಕ: 09.01.2014 ಮತ್ತು 17.03.2014

5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 67 ಸಿಎನ್‌ಎಸ್ 2014 ದಿನಾಂಕ:21.06.2014

**ಪ್ರಸ್ತಾವನೆ:**

ಶ್ರೀ ಓ.ಎಂ. ವೆಂಕಟರಮಣಪ್ಪ, ಎಹೆಚ್‌ಸಿ–36 ಮತ್ತು ಶ್ರೀ ಕೃಷ್ಣಯ್ಯ, ಎಪಿಸಿ–11 (ಇನ್ನು ಮುಂದೆ ಅರ್ಜಿದಾರರುಗಳೆಂದು ಕರೆಯಲ್ಪಡುವ) ಇವರುಗಳು ಡಿ.ಎ.ಆರ್.ಕೋಲಾರ ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಉದಾಸೀನತೆ ಅತೀವ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಅಮಾನುಲ್ಲಾಬೇಗ್, ಎ.ಆರ್.ಎಸ್.ಐ., ಶ್ರೀ ಓ.ಎಂ.ವೆಂಕಟರಮಣಪ್ಪ, ಎ.ಹೆಚ್.ಸಿ 36, ಶ್ರೀ ಕೃಷ್ಣಯ್ಯ ಎ.ಪಿ.ಸಿ 11, ಡಿ.ಎ.ಆರ್.ಕೋಲಾರ ಮತ್ತು ಶ್ರೀ ಕೋದಂಡರಾಮಯ್ಯ ಸಿಹೆಚ್‌ಸಿ 109, ಕೋಲಾರ ನಗರ ಪೊಲೀಸ್ ಠಾಣೆ ರವರುಗಳನ್ನು ದಿನಾಂಕ: 06.04.2010 ರಂದು ಕೋಲಾರ ನಗರ ಪೊಲೀಸ್ ಠಾಣೆ ಸಿ.ಸಿ. ಸಂಖ್ಯೆ: 190/2008, 235/2007 ರಲ್ಲಿನ ಆರೋಪಿಗಳಾದ ಶ್ಯಾಮ್ @ ರಾಜು @ ರಾಜರೆಡ್ಡಿ ಯು.ಟಿ.ಸಿ. ಸಂಖ್ಯೆ: 8916 ಹಾಗೂ ಫಾಜಿಲ್ @ ಫಾಜಿಲ್ ಪಾಷಾ ಯು.ಟಿ.ಸಿ ಸಂಖ್ಯೆ: 3425/2008 ರವರುಗಳನ್ನು ವಾಹನ ಸಂಖ್ಯೆ ಕೆಎ07–ಜಿ–223 ರಲ್ಲಿ ಬೆಂಗಳೂರಿನ ಪರಪ್ಪನ ಅಗ್ರಹಾರ ಕಾರಾಗೃಹದಿಂದ ಕೋಲಾರಿನ ಘನ ಪಿ.ಸಿ. ಜೆ.ಎಂ. ನ್ಯಾಯಾಲಯಕ್ಕೆ ಹಾಜರಪಡಿಸಿ, ನಂತರ ವಾಪಸ್ಸು ಬೆಂಗಳೂರಿನ ಪರಪ್ಪನ ಅಗ್ರಹಾರ ಕಾರಾಗೃಹಕ್ಕೆ ಕರೆದುಕೊಂಡು ಹೋಗುವ ಸಮಯದಲ್ಲಿ ಮಾಲೂರು ಸಮೀಪ ಚಿಕ್ಕತಿರುಪತಿಯ ಬಳಿ ಆರೋಪಿತರ ಪೈಕಿ ಶ್ಯಾಮ್ @ ರಾಜ @ ರಾಜಾರೆಡ್ಡಿ ಮೂತ್ರ ವಿಸರ್ಜನೆಗೆ ಮಾಡಬೇಕೆಂದು ಕೇಳಿದ್ದು, ಬೆಂಗಾವಲಿಗೆ ನಿಯೋಜಿಸಿದ್ದ ಪೊಲೀಸ್ ಸಿಬ್ಬಂದಿಗಳು ಆರೋಪಿಯನ್ನು ವಾಹನದಿಂದ ಕೆಳಗೆ ಇಳಿಸಿದ ಸಮಯದಲ್ಲಿ ಆರೋಪಿಯು ಕೈಕೋಳ ಸಮೇತ ಇವರುಗಳ ವಶದಿಂದ ತಪ್ಪಿಸಿಕೊಂಡು ಪರಾರಿಯಾಗಲು ಕಾರಣ ಕರ್ತರಾಗಿರುತ್ತಾರೆ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರುಗಳ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 20.12.2010ರ ಆದೇಶದಲ್ಲಿ ಶ್ರೀ ಓ.ಎಂ. ವೆಂಕಟರಾಮಪ್ಪ, ಎಹೆಚ್‌ಸಿ–36 ಶ್ರೀ ಕೃಷ್ಣಯ್ಯ ಎಪಿಸಿ–11, ಡಿ.ಎ.ಆರ್. ಕೋಲಾರ ಇವರುಗಳು ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಎರಡು ವರ್ಷಗಳ ಕಾಲ ಮುಂದೂಡಿ, ಇವರುಗಳ ಅಮಾನತ್ತಿನ ಅವಧಿ ದಿನಾಂಕ: 07.04.2010ರಿಂದ ದಿನಾಂಕ: 28.08.2010ರವರೆಗಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾದ ದಂಡನೆಯನ್ನು ವಿಧಿಸಿದೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಸಲ್ಲಿಸಿದ್ದ ಮೇಲ್ಮನವಿಗಳನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 05.11.2011 ಮತ್ತು ದಿನಾಂಕ; 05.12.2011ರ ಆದೇಶದಲ್ಲಿ ಮೇಲ್ಮನವಿಗಳನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರುಗಳು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ಆ.ಪೊ.ಅ.ರವರುಗಳು 50 ವರ್ಷ ಮೀರಿದವರಾಗಿದ್ದು, ಆರೋಪಿಯು ಪರಾರಿಯಾಗುವಾಗ ಅವನನ್ನು ಹಿಡಿಯಲು ಸಾಧ್ಯವಾಗಿರುವುದಿಲ್ಲ. ಆದರೂ ಸಹ ರೈಫಲ್‌ನಿಂದ 2 ಸುತ್ತು ಗುಂಡು ಹಾರಿಸಿ ವಾಹನದಲ್ಲಿ ಹಿಂಬಾಲಿಸಿದ್ದರೂ ಆರೋಪಿಯನ್ನು ಹಿಡಿಯಲಾಗಿರುವುದಿಲ್ಲ. ಪ್ರಕರಣದ ಆರೋಪಿಗಳು ಕುಖ್ಯಾತ ಕಳ್ಳರಾಗಿದ್ದು ಇವರ ಬೆಂಗಾವಲಿಗೆ ವಿಶೇಷ ಪಡೆಯನ್ನು ನೇಮಿಸಲು ಮೇಲಾಧಿಕಾರಿಗಳು ತಿಳಿಸಿರುತ್ತಾರೆ. ಹಾಗೂ ಡಿಜಿಪಿರವರ ಸುತ್ತೋಲೆ ದಿನಾಂಕ: 20.05.1999ರನ್ವಯ ಕ್ರಮ ವಹಿಸಬೇಕಾಗಿರುತ್ತದೆ. ಆದರೆ ಆರೋಪಿಗಳಿಗೆ ಸಾಮಾನ್ಯ ಬೆಂಗಾವಲು ನೀಡಿರುವುದು, ಆರೋಪಿ ತಪ್ಪಿಸಿಕೊಳ್ಳಲು ಕಾರಣವಾಗಿದೆ. ಹೀಗಿರುವಾಗ ಬೆಂಗಾವಲಿದ್ದ ಅ.ಪೊ.ಅ.ಗಳು ಆರೋಪಿ ಪರಾರಿಯಾಗಲು ಕಾರಣವೆಂದು ತೀರ್ಮಾನಕ್ಕೆ ಬರುವುದು ಅಷ್ಟು ಸಮಂಜಸವಲ್ಲ. ಇವರುಗಳು ಶಕ್ತಿ ಮೀರಿ ಆರೋಪಿಯನ್ನು ಹಿಡಿಯುವಲ್ಲಿ ಪ್ರಯತ್ನಿಸಿರುತ್ತಾರೆ. ಮತ್ತು Criminal Chargesನಲ್ಲಿ ಇವರೆಲ್ಲರೂ ನಿರ್ದೋಷಿಗಳೆಂದು ತಿಳಿಸಲಾಗಿರುವ ಹಿನ್ನಲೆಯಲ್ಲಿ ಆ.ಪೊ.ಅ.ರವರುಗಳಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 141 ಪೊಸಿಅ 2013, ಬೆಂಗಳೂರು, ದಿನಾಂಕ: 01.07.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಓ.ಎಂ. ವೆಂಕಟರಮಣಪ್ಪ, ಎಹೆಚ್‌ಸಿ–36 ಮತ್ತು ಶ್ರೀ ಕೃಷ್ಣಯ್ಯ, ಎಪಿಸಿ–11, ಡಿಎಆರ್, ಕೋಲಾರ ಇವರುಗಳಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನಾದೇಶವನ್ನು ಮಾರ್ಪಡಿಸಿ ಇವರುಗಳ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ (without cumulative effect) ಎರಡು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಲು ಹಾಗೂ ಅಮಾನತ್ತಿನ ಅವಧಿ ದಿನಾಂಕ: 07.04.2010 ರಿಂದ 28.08.2010ರವರೆಗಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಬಿ)

PR-567

## COMMERCE AND INDUSTRIES SECRETARIAT

**Sub** : Proposal of M/s Satarem Enterprises Pvt. Ltd., to establish an unit for "Municipal Solid Waste Management and Waste to Energy to generate 25 MW of Power" at Baggana Doddi Village, Anekal Taluk, Bangalore Urban District – Change of location to Magadi Taluk – Reg.

**Read :** 1. Proceedings of the 26th SHLCC meeting held on 09.11.2011.

2. Government Order No.CI 263 SPI 2011, dated : 16.12.2011.

3. Proceedings of the 32nd SHLCC meeting held on 23.08.2013.

**Preamble :**

The proposal of M/s Satarem Enterprises Pvt. Ltd., to establish an unit for "Municipal Solid Waste Management and Waste to Energy to generate 25 MW of power" at Baggana Doddi Village, Anekal Taluk, Bangalore Urban District with an investment of Rs.230.00 crores, was approved 26th SHLCC meeting held on 09.11.2011. The Government Order was issued vide Government Order dated : 16.12.2011 read at (2) above.

Though the company has made efforts in the implementation of the project, it could not make any progress in view of certain technical issues such as the land identified is adjacent to forest land; the land comes in the TGR zone 1 where disposal of waste without scientific treatment is not allowed etc. Hence the company has identified 45 acres of own land at Sy. No.30, 31, 32, 33 at Goroor Village, Soloor Hobli, Magadi Taluk, Ramanagara District and sought permission for change of location from Bagganadoddi village, Anekal Taluk to Goroor village in Magadi Taluk. The company has also sought permission to draw treated water from Nagasandra Sewerage Treatment Plant of BWSSB and for laying pipeline from STP Plant to the site.

The proposal of the company was examined in the 32nd State High Level Clearance Committee (SHLCC) meeting held on 23.08.2013. Government has examined the recommendations made by the State High Level Clearance Committee in all aspects.

Hence the following order.

**GOVERNMENT ORDER No.CI 263 SPI 2011, BANGALORE, DATED : 27.09.2013**

Under the circumstances explained in the preamble, Government pleased to accord in principle approval to M/s Satarem Enterprises Pvt. Ltd., to establish an unit for "Municipal Solid Waste Management and Waste to Energy to generate 25 MW of Power" for change of location of the project from Baggana Doddi Village, Anekal Taluk, Bangalore Urban District to Magadi Taluk, Ramanagara district and accorded permission to purchase 45 acres of land at Sy. No.30, 31, 32, 33 at Goroor Village, Soloor Hobli, Magadi Taluk, Ramanagara District U/s. 109 of Karnataka Land Reforms Act, 1961 and conversion of the same.

All other terms and conditions mentioned in the Govt. order dated 16.11.2011 remain unaltered.

By Order and in the name of the Governor of Karnataka,

**K.R.CHANDRAMMA**

Desk Officer (Technical Cell) (I/c),

Commerce & Industries Department.

**PR. 722**

## COMMERCE AND INDUSTRIES SECRETARIAT

**Subject:** Proposal to send revised coordinates for the grant of mining lease over an area of 140.00 hectares in the North Eastern Block Range (NEB range), Joga village, Sandur Taluk, Bellary District in favour of M/s. Steel Authority of India Limited-Visvesvaraya Iron & Steel Plant (SAIL-VISP) – Regarding issue of Corrigendum

**READ:**

1) Application of M/s VISL/SAIL dated 25/1/2007
2) Letter No. CI 58 MMM 2007, dated 30.7.2007 from Government of Karnataka
3) Notification No. GSR.778(E), dated 21/10/2011 of Government of India, published in Government of India Gazette
4) Notification No. CI 200 MMM 2005, dated 24/1/2008 of Government Karnataka
5) Government of India according prior approval for grant of mining lease No 5/ 174/ 2007 M. IV, dated 22/7/2008
6) Letter No ED/97/2012-13, dated 29/10/2012 of VISL to the Director, Mines and Geology.
7) Report of the Deputy Director, Mines and Geology, Hospet dated 18.2.2013 to the Director, Department of Mines & Geology
8) Letter No. DMG/177/AML-07/2013-14, dated 15/7/2013 and 20/3/2014 from Director, Department of Mines & Geology, Government of Karnataka.
9) Letter No. ED/40/13-14, dated 3/6/2013 and ED/59 /13-14, dated 22/7/2013 from M/s VISL/SAIL to the Secretary, Commerce and Industries Department
10) Letter No CI/ 65/ MMM/ 2013 dated 8/11/2013 from the Government to the Director, Mines and Geology
11) Report No. C/MN/66, dated February, 2004 of National Institute of Technology-Karnataka, Surtatkal
12) Letter No DMG/ 177/ AML/ 07/ 2013-14, dated 20/3/2014 from Director, Mines and Geology to the Government.
13) Judgment dated 21/1/2014 in WP No. 10536-10539/2012 by the Hon'ble High Court of Karnataka
14) Judgment dated 1/11/2012 in WP No. 9000/2011 by the Hon'ble High Court of Delhi
15) Judgment dated 2/9/2013 in SLA (C) No 7639/2013 by the Hon'ble Supreme Court of India
16) Judgment dated 28/10/2010 in WP No. 13697/2009 by the Honorable High Court of Delhi

**PREAMBLE:**

Three companies Sri B. Rudragouda, M/s. P.M. Mines and Minerals and M/s. VISL/SAIL (A Government of India Undertaking) has applied for mining leases in the reserved forest of North Eastern Block Range, Joga/ Bavihalli village in Sandur Taluk, Bellary

